# ಯುದ್ಧರಂಗದಿಂದ

ಆರ್. ಎ. ರಾವ್

ಸ್ವಾವಲಂಬನ ಪ್ರಕಾಶನ,

ಹೈದರಾಬಾದ್ (ದಕ್ಷಿಣ)

೨೦ ಫೆಬ್ರುವರಿ ೧೯೫೦ ಬೆಲೆ: ರೂ. ೧

# ಮುನ್ನುಡಿ

ಶ್ರೀ ಆರ್. ಎ. ರಾವ್ ತಮ್ಮ ಕತೆಗಳಿಗೆ ನನ್ನ ಮುನ್ನುಡಿಯನ್ನು ಕೋರಿದುದು ಒಂದು ಆಕಸ್ಮಿಕ ಘಟನೆ. ಹೈದರಾಬಾದಿನಲ್ಲಿ ಅವರ ಕೃತಿ ಅಚ್ಚಾಗುತ್ತಿರಲು ಸ್ಥಳೀಯ ವ್ಯಕ್ತಿಯೊಬ್ಬನನ್ನು ಹುಡುಕುವಲ್ಲಿ ಅವರ ದೃಷ್ಟಿಯು ನನ್ನ ಮೇಲೆ ಬಿದ್ದಿರಬೇಕು. ಕನ್ನಡ ಸಾಹಿತ್ಯಕ್ಕೆ ಮುನ್ನುಡಿಯ ಸೇವೆಯಾದರೂ ಸೇರಲೆಂದು ನಾನು ಅವರ ಕೋರಿಕೆಗೆ ಒಪ್ಪಿದೆನು.

ಸಾಹಿತ್ಯವು ವಿಶ್ವರೂಪವನ್ನು ತಾಳಬೇಕಾದರೆ ಜೀವನವು ಅದರಲ್ಲಿ ತುಂಬಿಬರಬೇಕು. ಬಹುಮುಖ ಮತ್ತು ವ್ಯಾಪಕವಾದ ಜೀವನವೆಲ್ಲಾ ಸಾಹಿತ್ಯದಲ್ಲಿ ಪ್ರತಿಬಿಂಬಿಸಿದಷ್ಟೂ ಅದಕ್ಕೆ ಪುಷ್ಟಿ ಹೆಚ್ಚುವುದು. ಸಾರ್ಥಕ್ಯ ಬೆಳೆವುದು. ಹೊಸಗನ್ನಡ ಸಾಹಿತ್ಯದಲ್ಲಿ ಸಣ್ಣ ಕತೆಗಳು ವಿಶಿಷ್ಟ ಸ್ಥಾನವನ್ನು ಪಡೆದಿವೆ. ವ್ಯವಧಾನವಿಲ್ಲದ ಈ ಲೋಕದಲ್ಲಿ ವಾಚಕವೃಂದ ಕಿರುಗತೆಗಳಿಗೆ ಒಲಿವುದು ಸಹಜವಾಗಿದೆ. ಆರ್. ಎ. ರಾವ್ ಇವರು ಈ ಕ್ಷೇತ್ರದಲ್ಲಿಯೇ ವ್ಯವಸಾಯ ಮಾಡಲು ಬಯಸಿ ಕನ್ನಡದ ದೇವಿಗೆ ಕಾಣಿಕೆ ಸಲ್ಲಿಸಿದ್ದಾರೆ. ಇವರ ಕತೆಗಳಲ್ಲಿ ಎರಡು ವಸ್ತುಗಳು ಎದ್ದು ಕಾಣುತ್ತವೆ. ಒಂದು ಯುದ್ಧರಂಗ, ಇನ್ನೊಂದು ಕಾಮರಂಗ. ಕಾಮರಂಗದಿಂದ ಬಂದ ಕತೆಗಳಿಗೆ ಕನ್ನಡದಲ್ಲಿ ಕೊರತೆಯಿಲ್ಲ. ಆದರೆ ಯುದ್ಧರಂಗದಿಂದ ಬರುವ ಕತೆಗಳು ನಿಜವಾಗಿಯೂ ಆದರಣೀಯವಾಗಿವೆ. ಈ ಎಲ್ಲ ಕತೆಗಳೂ 'ಉಷಾ', 'ಸ್ವತಂತ್ರ', ಮತ್ತು 'ಪ್ರಜಾಮತ' ಗಳಲ್ಲಿ ಈಗಾಗಲೇ

ಆಹ್ಲಾದವು. ಲೇಖಕರಲ್ಲಿ ಕತೆಯ ಕಲೆ ಕೃಷಿಯನ್ನು ಕೋರು-ತ್ತಿದೆ ಎಂದು ಇವರ ಕತೆಗಳನ್ನೋದಿದರೆ ಎನ್ನಿಸದಿರದು. ಹೊಸ-ಯಾದ ಅನುಭವ ಸಂಯಮ ನಿರೀಕ್ಷಣೆಯಲ್ಲಿದೆ. ವಯಸ್ಸು ತುಂಬಿ ದಂತೆ ಲೇಖಕರ ಕಲೆ ಪರಿಪಕ್ವವಾಗುವುದೆನ್ನುವುದರಲ್ಲಿ ಸಂಶಯ-ವಿಲ್ಲ. ವಿಶೇಷವಾಗಿ ಕತೆಗಳು ಘಟನಾತ್ಮಕವಾಗಿವೆ. ಪಾತ್ರಪೋಷಣೆ ಘಟನೆಗೆ ಸೆರೆಯಾಗಿದೆ. ಅದಕ್ಕಾಗಿ ಧ್ವನಿಗಿಂತ ವಾಚ್ಯ ಹೆಚ್ಚಾ ಗಿದೆ. ಅನುಭವ ಆಹ್ಲಾದನಕ್ಕಾಗಿ ಕಾದಿದೆ. ಆದರೆ ಆಯ್ದ ವಸ್ತು ಪರಿಣಾಮಕಾರಿ ಎನ್ನುವದರಲ್ಲಿ ಸಂಶಯವಿಲ್ಲ. ಜಮಾದಾರರು ಇನ್ನೂ ಯುವಕರು. ಇದು ಅವರ ಮೊದಲ ಕೃತಿ. ಇದಕ್ಕಿಂತ ಹೆಚ್ಚಿನ ಕತೆಗಳನ್ನು ಕನ್ನಡ ತಾಯಿಗೆ ಅರ್ಪಿಸುವ ಪುಣ್ಯವು ಇವರಿಗೆ ಲಭಿಸಲೆಂದು ಹಾರೈಸಿ ವಾಚಕವೃಂದವು ಸಲುಗೆಯಿಂದ ಅವರನ್ನು ಹುರಿದುಂಬಿಸಬೇಕೆಂದು ಕೋರುವೆನು.

ಬಾಗ್ ಲಿಂಗಂಪಲ್ಲಿ
ಹೈದರಾಬಾದು-ದಕ್ಷಿಣ.
೨೦ ೨-೧೯೫೦

**ಮಾನ್ವಿ ನರಸಿಂಗರಾವ್**

*

# ಅರಿಕೆ

ಭಾರತವು ಸ್ವತಂತ್ರವಾಗಿ, ಕಾಂಗ್ರೆಸ್ ಸರಕಾರದ ಪ್ರತಿಷ್ಠಾಪನೆಯಾದ ಮೇಲೆ, "ಡಿಫೆನ್ಸ್ ಬಜೆಟ್"ನ ಹಣವನ್ನು ನಾಗರಿಕರು ಅರಗಿಸಿಕೊಳ್ಳಬೇಕೋ, ಅಥವಾ ಸೈನಿಕರು ನಕ್ಕಿಸಿಕೊಳ್ಳಬೇಕೋ ಎಂಬ "ತ್ರಿಕ್ಕಾಟ" ತೀವ್ರವಾಗಿ, ನಮ್ಮಲ್ಲಿ ಕೆಲವರಿಗೆ ಸೈನಿಕವೃತ್ತಿಯಿಂದ 'ಅರ್ಧಚಂದ್ರಪ್ರಯೋಗ'ವಾಯಿತು. ಸೈನ್ಯವು ಭಾರತದ ಸ್ವಾತಂತ್ರ್ಯಕ್ಕೆ ಏನೂ ಚಳವಳಿ ಹೂಡಲೇ ಇಲ್ಲ ಎಂಬ ತಪ್ಪು ಕಲ್ಪನೆ-ಯಿಂದಲೂ ಸ್ವಾತಂತ್ರ್ಯ ಚಳವಳಿಯು ಗುತ್ತಿಗಾರಿಕೆ ಕೇವಲ ಒಂದು ರಾಜಕೀಯ ಸಂಸ್ಥೆಯ ಸದಸ್ಯರದ್ದೇ ಎಂಬ ಅಂಧಶ್ರದ್ಧೆಯಿಂದಲೂ, ಎಲ್ಲ ರಂಗಗಳಲ್ಲೂ ಅಂಥಹ-ವರದೇ ಕೈವಾಡ ನಡೆದಿರುವಲ್ಲಿ, 'ಮುಂದೇನು' ಎಂಬ ಮಹಾ ಪ್ರಶ್ನೆಯನ್ನು ಎದುರಿಸುತ್ತ ಅನಾಯಾಸ ದೊರೆತ ವಿರಾಮದ ಸದುಪಯೋಗ ಮಾಡಿಕೊಂಡು, ಯುದ್ಧರಂಗದಿಂದ ಬರೆದ ಕೆಲವು ಕೃತಿಗಳ ಸಂಕಲನವನ್ನು ಹೊರಡಿಸಿದ್ದೇನೆ.

ಇಂಥ ಸಂಕಲನವನ್ನು ಈ ಮೊದಲೇ ಹೊರಡಿಸಬೇಕೆಂದು ಮಾಡಿದ ಪ್ರಯತ್ನವೆಲ್ಲಾ, ಸಾಹಿತ್ಯರಂಗದಲ್ಲಿಯೂ ಕಂಡು ಬರುವ "ನಮ್ಮವರು ತಮ್ಮವರು" ಎಂಬ ಚಕ್ರವ್ಯೂಹದಿಂದಾಗಿ ನಿಷ್ಫಲವಾಯಿತು. ಆದುದರಿಂದ ನಾನೇ ಸ್ವತಂತ್ರವಾಗಿ ಈ ಸಾಹಸಕ್ಕೆ ಕೈಹಾಕಬೇಕಾಯಿತು.

ಈ ಸಂಕಲನದಲ್ಲಿ ಏಳು ಕೃತಿಗಳಿವೆ. ಮುಖಪುಟದಲ್ಲಿ ಕಾಣಿಸಿದಂತೆ ಜೀವನಾವಶ್ಯಕತೆಗಳು, ಸಮಾಜದ ಸಂಕುಚಿತ ಮನೋವೃತ್ತಿ, ಬಂಡವಾಳಶಾಹಿ, ನಿರುದ್ಯೋಗ ಮುಂತಾದ ದುಷ್ಟ ಶಕ್ತಿಗಳು ಬಡ ಹಿಂದುಸ್ತಾನಿಗಳನ್ನು ಜನತಂತ್ರ ಹಾಗೂ ವಿಶ್ವಶಾಂತಿ ರಕ್ಷಣೆಗ ಹೂಡಿದುದು ಎಂದು ಹೇಳಲ್ಪಟ್ಟ ಎರಡನೇ ಮಹಾ-ಯುದ್ಧಕ್ಕೆ ಆಹುತಿಯಾಗಿ, ಬ್ರಿಟಿಷ್ ಸಾಮ್ರಾಜ್ಯಶಾಹಿಗೆ ಒಪ್ಪಿಸುತ್ತವೆ. ಈ ಶಕ್ತಿ-ಗಳ ಸುಳಿಯಲ್ಲಿ ಸಿಕ್ಕ ಲಕ್ಷಗಟ್ಲೆ ಹಿಂದೂಸ್ಥಾನಿ ಯೋಧರು ಬಣ್ಣಿಸಲಾರದಷ್ಟು ದೈಹಿಕ ಹಾಗೂ ಮಾನಸಿಕ ಕಷ್ಟಗಳನ್ನು ಅನುಭವಿಸುತ್ತಾ, ನೊಣಗಳಂತೆ ಸತ್ತು-ಬೀಳುತ್ತಿರಲು, ಅಂಥ ಪ್ರಸಂಗದಲ್ಲಿ ಸಿಕ್ಕುಬಿದ್ದ ಸಿಪಾಯಿಯೊಬ್ಬನು, ರೊಚ್ಚಿಗೆದ್ದು, ತಾನು ನಂಬಿಕೊಂಡು ಬಂದಿದ್ದ ಸ್ವತಃ ಶ್ರೀಮನ್ನಾರಾಯಣನನ್ನೇ, ತನ್ನ ಪಾಡನ್ನು ಆತನೂ ಅನುಭವಿಸುವಂತೆ ಮಿಲಿಟರಿಯಲ್ಲಿ 'ಭಡತಿ' ಮಾಡಿಸುತ್ತಾನೆ (ಭಾವನಾ-ಪ್ರಪಂಚದಲ್ಲಿ). ಬ್ರಿಟಿಷ್ ನೇತೃತ್ವದಲ್ಲಿದ್ದ ಹಿಂದೀ ಸೈನ್ಯದಲ್ಲಿ ಬಿಳಿಯರು ಕಾಯ್ದು-ಕೊಂಡು ಬಂದಿದ್ದ 'ಬಿಳಿಯನ ಶ್ರೇಷ್ಠತೆ'ಯಿಂದಲೂ, ಆಂಗ್ಲೀಯ ಸಂಸ್ಕೃತಿ

ಇಲ್ಲದ ಭಾರತೀಯ ಶ್ರೀಮನ್ನಾರಾಯಣನಿಗೆ, ಅತ್ಯಂತ ಕಷ್ಟ ಕೆಲಸವಾದ Cooks I. T. ವರ್ಗ ಬಿಟ್ಟರೆ ಗತ್ಯಂತರವಿರಲಿಲ್ಲ! ಆ ಸಂದರ್ಭದಲ್ಲಿ ಭಗವದ್ಗೀತೆಗಳ ಉಪದೇಶವಾಗಿ, ಅವರಿಂದ ಸಿಪಾಯಿಗೆ ಒಂದು ತರಹದ ಸಮಾಧಾನವುಂಟಾಗುತ್ತದೆ. ಇದು ಎರಡು ಭಾಗದಲ್ಲಿರುವ 'ಆಧುನಿಕ ಭಗವದ್ಗೀತೆಗಳ' ತಳಹದಿ. ವಿಶ್ವದಲ್ಲಿ ನಡೆಯುತ್ತಿರುವ 'ಆಗು ಹೋಗುಗಳು' ತಮ್ಮ ಮೇಲೂ ಪರಿಣಾಮ ಬೀರುತ್ತಿರುವುದನ್ನು ಅಲಕ್ಷಿಸಿ, ಆ 'ಆಗುಹೋಗು'ಗಳಿಂದ ತಮ್ಮ ಹಿತಕ್ಕೆ ಧಕ್ಕೆ ಉಂಟಾಗದಂತೆ ಯಾವುದೇ ತರಹದ ಸುರಕ್ಷಣೆಯ ಕ್ರಮಗಳನ್ನು ಕೈಗೊಳ್ಳದೆ, ಹಣೆ ಬರೆಹ, ಕರ್ಮವೆಂದು ಬಂದುದಕ್ಕೆಲ್ಲ ತಲೆಬಗ್ಗಿಸುವ ನಮ್ಮ ಮನೋವೃತ್ತಿ "ಅದೂ ಯುದ್ಧದ ಸುಳಿಯೊಳಗೆ ಸಿಕ್ಕಿತು" ಎಂಬುದರಲ್ಲಿ ಪ್ರತಿಬಿಂಬಿಸಲು ಪ್ರಯತ್ನಿಸಲಾಗಿದೆ. ಪ್ರಾಂತೀಯತೆ, ಜಾತೀಯತೆ, ಸಂಕುಚಿತತೆ ಮುಂತಾದ ಭಾರತೀಯರಲ್ಲಿ ಬೆಳೆದು ಬಂದಿರುವ ದುರ್ಗುಣಗಳು ಹೇಗೆ ಭಾರತೀಯರಲ್ಲಿ ಒಗ್ಗಟ್ಟಿಲ್ಲದಂತೆ ಮಾಡಿ, ಅವರ ಕ್ಷೇಮಕ್ಕೆ ಅಪಾಯ ತಂದಿದೆ ಎಂಬುದನ್ನು, ವಿವಿಧ ಪ್ರಾಂತದಿಂದ ಬಂದ ಜನರು ಒಟ್ಟಿಗೆ ಕಲೆತು ಒಂದೇ ಒಂದು ರಾತ್ರಿಯ ಕಾಲವನ್ನು ಕಳೆಯುವ ಪರಿಯನ್ನು ಬಣ್ಣಿಸುವ ದೃಶ್ಯ "ಯುದ್ಧರಂಗದಲ್ಲಿ ಒಂದು ರಾತ್ರಿ" ಎಂಬುದರಲ್ಲಿ ಮೂಡಿಸಲು ಪ್ರಯತ್ನಿಸಲಾಗಿದೆ. ಈ ನಾಟಕ ವಸ್ತುಸ್ಥಿತಿಗೆ ಬಾಹಿರವಾಗಿಲ್ಲ. (ಇದು ಸೈನಿಕ ಸ್ಪರ್ಧೆಯಲ್ಲಿ ಬಹುಮಾನವನ್ನು ಪಡೆಯಿತು.) ಭಾರತವನ್ನು ಇಬ್ಭಾಗ ಮಾಡಿದ್ದೇ ಅಲ್ಲದೆ, ಅನೇಕ ಯಮಯಾತನೆಗಳಿಗೂ, ಕಷ್ಟ ಪರಂಪರೆಗೂ, ಅಶಾಂತತೆಗೂ ಕಾರಣವಾದ, ಮತ್ತು ಇನ್ನೂ ಆಗಿರುವ "ಭಾರತದ ಹಿಂದೂಗಳೂ ಮುಸ್ಲಿಂರೂ ಬೇರೆ ಬೇರೆ ಜನಾಂಗಕ್ಕೆ ಸೇರಿದವರು" ಎಂಬ ತತ್ತ್ವವನ್ನು ಅನುಭವದಿಂದ ವಿಮರ್ಶಿಸಿದ ಲೇಖನ "ಕೆಲವು ಅನುಭವಗಳು." 'ಪ್ರೇಮ' ಎಂಬ ಹೆಸರಿನಲ್ಲಿ, ಬಿಳಿಯರ ಚಾಣಾಕ್ಷತೆ ಹಾಗೂ ಕುತಂತ್ರಕ್ಕೆ ಬಲಿಬಿದ್ದು, 'ದೀಪ'ವನ್ನು ಮೋಹಿಸ ಹೋಗಿ ರೆಕ್ಕೆ ಸುಟ್ಟುಕೊಂಡು ಒದ್ದಾಡುವ ಪತಂಗದ ಕರುಣ ಕಥೆ 'ಸ್ನೇಹಪ್ರಭೆಯ ಪ್ರೇಮ ವಿವಾಹ' ಎಂಬುದು. ಬಿಳಿಯರ ಅಧಿಕಾರ ದರ್ಪಗಳಿಗೆ ಮರುಳಾಗಿ, ಅವರಿಂದ ದೊರೆಯಬಹುದಾದ ಪ್ರಾಪಂಚಿಕ ಸುಖದ ಆಶೆಗಳಿಗೆ ತಮ್ಮನ್ನು ತಾವು ಮಾರಿಕೊಂಡು, ಕೇವಲ ಮದದಿಂದ ಭಾರತೀಯರನ್ನೇ ತುಚ್ಛವಾಗಿ ಕಂಡ ಅನೇಕ "ಮಿಸ್ ಬಾಬು ಸುಂದರಂ"ಗಳನ್ನು ಭಾರತೀಯ ಯೋಧ ಎದುರಿಸಬೇಕಾಯಿತು ಎಂಬುದು ಅನುಭವದ ಮಾತು. ಬ್ರಿಟಿಷರು ನಿರ್ಮಿಸಿದ್ದ W. A. C. (I) ದಳವನ್ನು ಮುರಿದು ಹಾಕಿದ ಕಾರಣಗಳನ್ನು ಅರಿತವರಿಗೆ ಇಂತ ಪ್ರಸಂಗಗಳು ಲೆಕ್ಕವಿಲ್ಲದಷ್ಟು ನಡೆದವು ಎಂಬುದನ್ನು ಒತ್ತಿ ಹೇಳಬೇಕಾಗಿಲ್ಲ. ಲಕ್ಷಾವಧಿ ಜನರು, ಮನಸ್ಸಿಲ್ಲದಿದ್ದರೂ, ಯುದ್ಧಕ್ಕೆ ಆಹುತಿ-

ಯಾಗುವ ಸನ್ನಿವೇಶವನ್ನು ಕಲ್ಪಿಸಿದ ಹಿರಿಯರು, ಈಗಾಗಲೇ ಕಲ್ಪಿಸಿಕೊಂಡಿರುವ ತೊಡಕುಗಳಿಂದ ಬುದ್ಧಿ ತಂದುಕೊಳ್ಳದೆ ಸ್ವಾರ್ಥತೆಯಿಂದಲೂ, ಅಜ್ಞಾನದಿಂದಲೂ, ತಮ್ಮ "ಕಾರಸ್ಥಾನ"ಗಳಲ್ಲಿ ಮಗ್ನರಾಗಿರುವುದನ್ನು 'ಎರಡು ಕೊಲೆ'ಗಳಲ್ಲಿ ಚಿತ್ರಿಸಲಾಗಿದೆ.

ಈ ಸಂಕಲನವನ್ನು ಹೊರಡಿಸಲು ವಿಧವಿಧವಾದ ರೀತಿಯಲ್ಲಿ ಉತ್ತೇಜನ ಕೊಟ್ಟ ಶ್ರೀಗಳಾದ ಪ್ರಾಣೇಶಾಚಾರ್ಯ, ಬಿ. ಕೃಷ್ಣಮೂರ್ತಿ, ಆರ್. ಕೆ. ರಾವ್, ಮತ್ತು ಬಿ. ಹ. ಇನಾಮದಾರ್ ಇವರುಗಳೂ, ತಮ್ಮ ಅನುಭವವನ್ನು ಉಪಯೋಗಿಸಿ ತಮ್ಮದೇ ಕೆಲಸವೇನೋ ಎಂಬಂತೆ ಸ್ವತಃ ಹೊಣೆ ವಹಿಸಿಕೊಂಡು ಪುಸ್ತಕವನ್ನು ಈ ರೀತಿಸುಂದರವಾಗಿ ಪೂರ್ಣಗೊಳಿಸಿಕೊಟ್ಟ ಶ್ರೀ ಕೇಶವ ಅಯ್ಯಂಕರರಿಗೂ, ಅನಾಮಧೇಯ ಹಾಗೂ ಅಪರಿಚಿತನೊಬ್ಬನು ಕೇಳಿಕೊಂಡರೂ, "ಏನೋ ಬರೆದಿದ್ದಾನೆ" ಎಂದು ಅಸಡ್ಡೆ ಮಾಡದೆ, ಮುನ್ನುಡಿ ಬರೆದುಕೊಟ್ಟು ಆಶೀರ್ವದಿಸಿದ ಶ್ರೀ ಮಾನ್ವಿ ನರಸಿಂಗರಾಯರಿಗೂ, ಮತ್ತು ನನ್ನ ವಿಚಾರಗಳನ್ನು ಅತ್ಯಲ್ಪ ಅವಧಿಯಲ್ಲಿ ಚಿತ್ರ ರೂಪದಲ್ಲಿ ಇಳಿಸಿಕೊಟ್ಟ ಶ್ರೀ ಭಗವಾನ್ ಇವರಿಗೂ ನಾನು ಅತ್ಯಂತ ಋಣಿಯಾಗಿದ್ದೇನೆ.

ತಪ್ಪೋ, ಒಪ್ಪೋ, ಅಂತೂ ಬರೆದಿದ್ದಾಗಿದೆ, ಪ್ರಕಟಿಸಿದ್ದಾಗಿದೆ. ಕಂಡಿದ್ದು ಕಂಡಹಾಗೆ, ಮುಚ್ಚು ಮರೆಯಿಲ್ಲದೆ, ನಿಸ್ಸಂಕೋಚವಾಗಿ, ನಿರ್ಭೀತಿಯಿಂದ ಹೇಳುವುದು ಸೈನಿಕನಲ್ಲಿ ಬೆಳೆದು ಬರುವಂಥ ಗುಣ. ವಾಚಕರಿಗಂತೂ ತಮ್ಮ ತಮ್ಮ ಅಭಿಪ್ರಾಯಗಳ ಬಗ್ಗೆ ಸ್ವಾತಂತ್ರ್ಯ ಇದ್ದೇ ಇದೆ.

ಹೈದರಾಬಾದ್
೨೦-೨-೫೦

ಆರ್. ಎ. ರಾವ್

*

# ಅನುಕ್ರಮಣಿಕೆ





# ಅರ್ಪಣೆ



ಕ್ಷಮೆ, ತ್ಯಾಗವೇ ಮೂರ್ತಿವೆತ್ತ

ತಾಯಿ ಕಾವೇರಿಯ

ಸವಿನೆನಪಿಗೆ

ಮುಡಿಪು

ಆರ್. ಎ. ರಾವ್

# ಆಧುನಿಕ ಭಗವದ್ಗೀತೆ!

## ಭಗವಂತನ ಅವತಾರ

ಇಂದು ಅಮಾವಾಸ್ಯೆ. ಇದೇ ಈಗ ರಾತ್ರಿಯು, ಹನ್ನೆರಡು ಘಂಟೆಗಳ ಘೋರ ದಾಳಿಯ ಪರಿಣಾಮವಾಗಿ, "ಬೆಳಕಿನ" ಸೇನೆಯನ್ನು ಸಂಪೂರ್ಣವಾಗಿ ಸೋಲಿಸಿ ತನಗೆ ಗಂಡಾಂತರವಾದಂಥ ಬೆಳಕಿನ ಗೂಢಚಾರರೊಬ್ಬರನ್ನೂ ಬಿಡದೆ, ಸದೆಬಡಿದು ಏಕಚಕ್ರಾಧಿಪತ್ಯವನ್ನು ವಿಶಾಲ ಗಗನದಲ್ಲಿ ಸ್ಥಾಪಿಸಲು ಶಕ್ತನಾಗಿ, ಅಷ್ಟಕ್ಕೂ ತೃಪ್ತನಾಗದೆ, ತನ್ನ ಪ್ರಭಾವವನ್ನು ಜಗತ್ತಿನ ಮೇಲೂ ಬೀರಲು ಉದ್ಯುಕ್ತನಾಗಿದ್ದನು. ಆದರೆ ಇದು ಏನು? ಈಶಾನ್ಯ ದಿಕ್ಕಿನಲ್ಲಿ "ಮೋಡರಾಜನು" ತನ್ನ ಸೇನೆಯನ್ನು ಸಜ್ಜುಗೊಳಿಸುತ್ತಾ ಮುಂಬರುವ ಆಕ್ರಮಣದ ಚಿಹ್ನೆಯೆಂಬಂತೆ ಸೇನೆಯ ಮುಖ್ಯ ಭಾಗವಾದಂಥ ಪ್ರಚಂಡ ಮಾರುತವನ್ನು ಪ್ರಯೋಗಿಸಿಯೇ ಬಿಟ್ಟನು. ಮೋಡರಾಜನ ಸೇನೆಯು ವಾಯುವನ್ನು ಅನುಸರಿಸುತ್ತಾ ಆಕ್ರಮಣಕ್ಕೇ ಮೊದಲಿಟ್ಟಿತು. ನೋಡು ನೋಡುತ್ತಿರುವಂತೆಯೇ ಮೋಡರಾಜನು ಮಾರುತನ ಶಕ್ತಿ ಸಾಮರ್ಥ್ಯದಿಂದಲೂ ತನ್ನ ಅಪಾರವಾದ ಸೇನೆಯ ಬಲದಿಂದಲೂ, ರಾತ್ರಿಯ ಏಕಚಕ್ರಾಧಿಪತ್ಯವನ್ನು ಛೇದಿಸಿ ನುಚ್ಚುನೂರು ಮಾಡಿಬಿಟ್ಟನು. ಗಗನದಲ್ಲಿ ಮತ್ತೊಂದು ದೊಡ್ಡ ಕಾಳಗವೇ ಆರಂಭವಾಯಿತು. ಒಂದೇ ಸಮನೆ ಕೇಳಿ ಬರುತ್ತಿರುವ ಗುಡುಗು ಸಿಡಿಲುಗಳು, ಪ್ರಕೃತಿಯು ನಡೆಸುತ್ತಿರುವ ಘೋರ ಕಾಳಗದ ಭೀಕರತೆಯನ್ನು ಜಗತ್ತಿಗೆ ಸಾರುತ್ತಿದ್ದವು. ರಾತ್ರಿಯಿಂದ ಪರಾಜಿತವಾದ ಬೆಳಕು, ಇದೇ ಶ್ರೇಷ್ಠ ಸಮಯವೆಂದು ಯೋಚಿಸಿ, ತನ್ನ ಅಳಿದುಳಿದ ಸೇನೆಯೊಂದಿಗೆ ಶತ್ರುದಳವನ್ನು ಹೊಕ್ಕು,

ಅತ್ಯಂತ ಘೋರ ಯುದ್ಧವನ್ನು ಹೂಡಿ, ತನ್ನ ಅಂತಿಮ ವಿಜಯದ ಪರವಾಗಿ ಜಗತ್ತಿಗೆ ಆಶ್ವಾಸನ ಕೊಡಲು ಆಗಾಗ ತನ್ನ ಸಂದೇಶವನ್ನು ಕಳುಹಿಸುತ್ತಿತ್ತು.

ಇತ್ತ ಕಡೆ ಭೂಲೋಕದಲ್ಲಿಯೂ ಸಹ ಅದೇ ಅವ್ಯವಸ್ಥೆ. ಎಲ್ಲೆಲ್ಲೂ ಹಾಹಾಕಾರ, ಎಲ್ಲೆಲ್ಲೂ ರೋದನ; ಎಲ್ಲೆಲ್ಲೂ ಚೀತ್ಕಾರ. ಪ್ರಕೃತಿಯನ್ನೇ ತಲೆಕೆಳಗು ಮಾಡುವಂತಹ ಮತ್ತೊಂದು ಭೀಕರ ಸಂಗ್ರಾಮವು ತಲೆಹಾಕಿಬಿಟ್ಟಿದ್ದಿತು. ಪ್ರಪಂಚದಲ್ಲಿ ಎಲ್ಲ ಕಡೆಯಿಂದಲೂ ಸೇನೆಯೆಂಬ ಹೆಸರಿನಲ್ಲಿ ಮನುಷ್ಯರನ್ನು ಒಟ್ಟುಗೂಡಿಸಿ ರಣದೇವಿಗೆ ಬಲಿ ಅರ್ಪಿಸಲ್ಪಡುತ್ತಿತ್ತು. ಒಂದು ಕಡೆ ಜರ್ಮನ್ಸ್, ಇಟಾಲಿಯನ್ಸ್, ಜಪಾನ್ ಮತ್ತು ಇವರ ಸಹಾಯಕರಾದ ಮಿಕ್ಕ್ಕೀಯ ಜನಾಂಗಗಳವರೂ, ಇನ್ನೊಂದು ಕಡೆ ಅಮೇರಿಕನ್ಸ್, ಬ್ರಿಟಿನ್, ರಷಿಯನ್ಸ್, ಚೈನೀಸ್, ಕೆನಡಿಯನ್ಸ್, ಆಸ್ಟ್ರೇಲಿಯನ್ಸ್, ಇಂಡಿಯನ್ಸ್, ಸೌತಾಫ್ರಿಕನ್ಸ್ ಮುಂತಾದವರೂ ಹೋರಾಡುತ್ತಿರಲಾಗಿ ಅದರ ಪರಿಣಾಮವಾಗಿ ಪ್ರತಿಯೊಂದು ನಿಮಿಷದಲ್ಲೂ ಅಸಂಖ್ಯಾತ ಜನರು ಸತ್ತುಬೀಳುತ್ತಿದ್ದರು. ಜನನಿಬಿಡವಾದ ಜಗತ್ತಿನಲ್ಲೆಲ್ಲ ಅತ್ಯಂತ ಸುಂದರವೆನಿಸಿಕೊಂಡಿರುವ ಕೈಗಾರಿಕೆಯ ತವರೂರಾದ ಕಲೆಯ ಕೇಂದ್ರ ಸ್ಥಾನವಾದ ಅನೇಕ ಪಟ್ಟಣಗಳು, ರಾಜಧಾನಿಗಳು ಪ್ರತಿಯೊಂದು ನಿಮಿಷದಲ್ಲೂ ನಡೆಯುವ ಬಾಂಬುದಾಳಿಯ ಪರಿಣಾಮವಾಗಿ ಧೂಳೀಪಟವಾಗಿ ಹೋಗುತ್ತಿದ್ದವು. ಹಸುಗೂಸುಗಳು, ಮಕ್ಕಳು, ಹೆಂಗಸರು, ಮುದುಕರು ಎಂಬ ಯಾವ ಭೇದಭಾವನೆಯನ್ನೂ ಇಡದೆ ಬಾಂಬರ್ ವಿಮಾನಗಳು ತಾವು ಹೋದ ಕಡೆಯಲ್ಲೆಲ್ಲಾ ಸರ್ವನಾಶವನ್ನುಂಟು ಮಾಡುತ್ತಿದ್ದವು. ಅತ್ತ ಕೋಟಿಗಟ್ಲೆ ದ್ರವ್ಯವನ್ನು ವ್ಯಯಮಾಡಿ, ನಿರ್ಮಿಸಲ್ಪಟ್ಟ ರಾಜಮಹಾರಾಜರುಗಳ ಸುಂದರ ಭವನಗಳೂ ಇತ್ತ ಭಿಕಾರಿಗಳ ಹರಕುಮುರುಕು ಗುಡಿಸಲುಗಳೂ ತಾರತಮ್ಯವಿಲ್ಲದೆ "ಯುದ್ಧ"ವೆಂಬ ಕಾಳ್ಗಿಚ್ಚಿಗೆ ಸಿಲುಕಿ, ಭಸ್ಮವಾಗಿ ಹೋಗುತ್ತಿದ್ದವು. ಹೊಟ್ಟೆಗಿಲ್ಲದೆ ಸಾಯುವವರು ಎಷ್ಟುಮಂದಿ, ಮಾನಹಾನಿಗಾಗಿ ಸಾಯುವವರು ಎಷ್ಟು ಮಂದಿ!

ಇದೇನು ಇಪ್ಪತ್ತನೆಯ ಶತಮಾನದ ಆಧುನಿಕ ಪ್ರಪಂಚವೋ ಅಥವಾ ಯಮಧರ್ಮರಾಜನ ನರಕಶಾಲೆಯೋ?

ಇಷ್ಟರಲ್ಲೇ ಮೋಡರಾಜನು ತನ್ನ ಆಕ್ರಮಣವನ್ನು ಭೂಲೋಕದ ಮೇಲೂ ಮಾಡಲೆತ್ನಿಸಿ ಅತಿ ಭೀಕರವಾದ ದಾಳಿ ನಡೆಸಿದನು. ಹೇಳು ಹೇಳುವಷ್ಟರಲ್ಲಿಯೇ ಜಗತ್ತಿನಲ್ಲಿ ಎಲ್ಲೆಲ್ಲೂ ನೀರೇನೀರಾಗಿಹೋಯಿತು.

ಒಟ್ಟಿನಲ್ಲಿ ಪ್ರಕೃತಿಯೇ ರೌದ್ರಾವತಾರವನ್ನು ತಾಳಿ ತಾಂಡವ ನೃತ್ಯಕ್ಕೆ ಆರಂಭಿಸಿತ್ತು. ಹೀಗಿರುವಾಗ ಪ್ರಕೃತಿಯ ಒಂದು ಭಾಗವಾದಂಥ ಕ್ಷೀರಸಾಗರವು ಈ ತಾಂಡವ ನೃತ್ಯದಲ್ಲಿ ಭಾಗವಹಿಸದೇ ಇರಲು ಹೇಗೆ ತಾನೇ ಸಾಧ್ಯ? ಎಷ್ಟೋ ಶತಮಾನಗಳಿಂದ ಸೌಮ್ಯವಾಗಿದ್ದ ಕ್ಷೀರ ಸಾಗರವು ಇಂದು ಮದದಿಂದ ಹುಚ್ಚೆದ್ದು ಕುಣಿಯುತ್ತಿತ್ತು. ಪರ್ವ-ತಾಕಾರಗಳ ರೂಪದಲ್ಲಿ ಮೇಲೆದ್ದು ಬೀಳುವ ಅಲೆಗಳು ಒಂದಕ್ಕೊಂದು ರಭಸದಿಂದ ಡಿಕ್ಕಿ ಹೊಡೆಯುವುದರಿಂದ ಹುಟ್ಟುವ ಭಯಂಕರ ಶಬ್ದದಿಂದಲೂ, ಸಪ್ತಮಹಾಸಾಗರಗಳನ್ನು ಒಮ್ಮೆಲೇ ಮನಬಂದಂತೆ ಕುಣಿಸಲು ಕಾತುರನಾದ ಪ್ರಚಂಡವಾಯುವಿನ ಬೀಸುವಿಕೆಯಿಂದ ಹುಟ್ಟುವ "ಭರ್" ಎಂಬ ಶಬ್ದದಿಂದಲೂ ವಾತಾವರಣವೆಲ್ಲವೂ ತುಂಬಿಹೋಗಿತ್ತು.

ಒಮ್ಮೆಲೇ ಜಗತ್ತಿನಲ್ಲಿ ತಲೆಹಾಕಿದ ಈ ಕ್ರಾಂತಿಯಿಂದ ಕ್ಷೀರಸಾಗರ-ದಲ್ಲಿ ನಿಶ್ಚಿಂತೆಯಿಂದ ಆದಿಶೇಷನ ಮೇಲೆ ಪವಡಿಸಿದ್ದ ಶ್ರೀಮನ್ನಾರಾಯಣನ ಮನದಲ್ಲೂ ಸಹ ಸ್ವಲ್ಪ ಕಳವಳವೇ ಉಂಟಾಯಿತು. ಮಲಗಿದ್ದವನು ಎದ್ದು ಕುಳಿತನು. ಬಹುಕಾಲದಿಂದ ಆತನ ಪಾದದ ಹತ್ತಿರ ಕುಳಿತು ಕುಳಿತು, ಸಾಕಾಗಿ ತೂಕಡಿಸುತ್ತಿದ್ದ ಶ್ರೀ ಲಕ್ಷ್ಮೀದೇವಿಗೆ ಅಪರೂಪವಾಗಿ ಪತಿಯು ಒಮ್ಮೆಲೇ ಎದ್ದು ಕುಳಿತುಕೊಳ್ಳಲು ನಿದ್ರಾಭಂಗವಾಗಿ ಕಣ್ಣು ತೆರೆದು, ಹಾಗೆ ಅನಿರೀಕ್ಷಿತವಾಗಿ ಎದ್ದು ಕುಳಿತುಕೊಳ್ಳಲು ಕಾರಣವೇನೆಂದು ಕುತೂಹಲವುಳ್ಳವಳಾಗಿ ಸುತ್ತಲೂ ನೋಡಿ ಪ್ರಕೃತಿಯು ತಾಳಿದ ಭೀಕರತೆಯನ್ನು ಮನಗಂಡರೂ, ಪತಿಯ ಸಾಮರ್ಥ್ಯದಲ್ಲಿ ನಂಬುಗೆ

ಮುಳ್ಳವಳಾದುದರಿಂದ ಸ್ವಲ್ಪವೂ ಬೆದರದೆ, ಹಸನ್ಮುಖಳಾಗಿ ಪತಿಯ ಮುಖದ ಕಡೆ ನೋಡಿದಳು. ಶ್ರೀ ನಾರಾಯಣನ ಮನದಲ್ಲಿ ಉಂಟಾದ ಕಳವಳವು ಆತನ ಮುಖದಲ್ಲಿಯೂ ಸ್ಪಷ್ಟವಾಗಿ ಒಡೆದು ಕಾಣುತ್ತಿತ್ತು. ತಕ್ಷಣವೇ ಆಕೆಯ ನಗುಮುಖದಿಂದ ನಗೆಯು ಎಲ್ಲಿಯೋ ಹಾರಿ ಹೋಯಿತು. ಮೈಬೆವರಿಟ್ಟಿತು. ಅಂಗಾಂಗಗಳೆಲ್ಲವೂ ಕಂಪಿಸತೊಡಗಿತು. ಮಾತನಾಡಲು ಬಾಯಿಬಾರದು. ಪಾರ್ವತಿಯ ರೂಪದಲ್ಲಿ ವನವಾಸವನ್ನೂ, ಸೀತೆಯ ರೂಪದಲ್ಲಿ ತುರಂಗವಾಸವನ್ನೂ, ಭರತಮಾತೆಯ ರೂಪದಲ್ಲಿ ಗುಲಾಮಗಿರಿಯನ್ನೂ ಅನುಭವಿಸಿದ ಆಕೆ ತನಗೆ ಮತ್ತೇನೋ ಒಂದು ದೊಡ್ಡ ಗಂಡಾಂತರ ಬಂದಿತೆಂದು ಊಹಿಸಿದಳು. ತುಟಿಕಂಪಿಸುತ್ತಿರಲು ಬಾಡಿದ ಹೂವಿನಂತೆ ಕಂದಿದ ಮುಖವನ್ನು ಪತಿಯ ಕಡೆಗೆ ಹೊರಳಿಸಿ, ಬೆದರಿದ ಹರಿಣಿಯಂತೆ ಇರುವ ನಯನದ್ವಯಗಳಿಂದಲೇ ತನ್ನ ಸ್ಥಿತಿಯನ್ನು ಬಣ್ಣಿಸಿ ತನ್ನನ್ನು ಸಂತೈಸಬೇಕೆಂದು ಬೇಡಿದಳು. ಆದರೆ, ಏನೋ ಗೂಢಾಲೋಚನೆಯಲ್ಲಿ ಮಗ್ನನಾದ ಶ್ರೀಮನ್ನಾರಾಯಣನು ಆಕೆಯ ಕಡೆ ಲಕ್ಷ್ಯವನ್ನೇ ಕೊಡಲಿಲ್ಲ.

ಇದೇ ಸಮಯವನ್ನು ಸಾಧಿಸಿ ಆದಿಶೇಷನು ಬಹುಕಾಲದಿಂದ ದೇಹವನ್ನು ಸ್ವಲ್ಪವೂ ಅತ್ತ ಇತ್ತಲಾಗಿ ಅಲುಗಾಡಿಸಲು ಆಸ್ಪದವಿಲ್ಲದೆ ಒಂದೇ ತೆರನಾಗಿ ಭಾರವನ್ನು ಹೊತ್ತುಕೊಂಡು ಇದ್ದುದರಿಂದ ಉಂಟಾದ ಅಂಗಾಂಗಗಳ ನೋವನ್ನು ಹೋಗಲಾಡಿಸಿಕೊಳ್ಳಲು ಸ್ವಲ್ಪವಾದರೂ ಅವಕಾಶ ಸಿಕ್ಕಿತಲ್ಲಾ ಎಂದು ಸಂತೋಷಪಡುತ್ತಾ ಮೈಯನ್ನು ಹಾಗೊಮ್ಮೆ ಹೀಗೊಮ್ಮೆ ಕೊಂಚಕೊಂಚವಾಗಿ ಹೊರಳಿಸಲು ಪ್ರಾರಂಭಿಸಿದನು. ಆದರೆ ಆತನು ಬಹಳ ಹೊತ್ತು ಈ ತೆರನಾದ ಸ್ವಾತಂತ್ರ್ಯವನ್ನು ಳಿಸಿಕೊಳ್ಳಲು ಸಮರ್ಥನಾಗಲಿಲ್ಲ. ಈಗಾಗಲೇ ಸಮುದ್ರವು ಭಯಂಕರವಾಗಿ ಉಕ್ಕೇರಿಬಿಟ್ಟಿದ್ದಿತು. ಅಲೆಗಳ ತೀವ್ರತೆ ಹದ್ದು ಮೀರಿ ಹೋಗಿತ್ತು. ಮಹಾಶಕ್ತಿಯುತನಾದರೂ ಲೋಕವೇ ಕಂಡರಿಯದ ಈ ತೆರನಾದ ಪ್ರಕೃತಿಯ ತಾಂಡವ ನೃತ್ಯವಲ್ಲಿ ಆದಿಶೇಷನೂ ಸಹ ಅಲ್ಲೋಲಕಲ್ಲೋಲವಾದಂಥ ಸಾಗರದ

ಮೇಲೆ ಅಲ್ಲಾಡದಂತೆ ನಿಲ್ಲಲು ಅಸಮರ್ಥನಾದನು. ಆತನ ಮನದಲ್ಲಿ ದೊಡ್ಡ ಅಂದೋಲನವೇ ಎದ್ದಿತು. 'ನೋಡು ನಿನ್ನ ಕರ್ತವ್ಯವೇನು ? ಪ್ರಪಂಚಕ್ಕೇ ಒಡೆಯರಾದ ಶ್ರೀ ಲಕ್ಷ್ಮೀನಾರಾಯಣರನ್ನು ಸಂರಕ್ಷಿಸುವ ಭಾರವು ನಿನ್ನದಾಗಿದೆ' ಎಂದು ಯೋಚಿಸುತ್ತಾ ರಣಾಂಗಣದಲ್ಲಿ ತನ್ನ ಸ್ವಾಮಿಗೆ ವಿಜಯ ಸಾಧಿಸಿಕೊಡಲು ತನ್ನ ಸರ್ವಸ್ವವನ್ನೂ ಅರ್ಪಿಸಿ, ಶಕ್ತಿಮೀರಿ ಹೋರಾಡುವ ಯೋಧನಂತೆ ಜಾರಿಯಾರಿಗೂ ತನ್ನ ಜವಾಬ್ದಾರಿಯನ್ನು ಮನಸ್ಸಿನಲ್ಲಿ ತಂದುಕೊಳ್ಳುತ್ತಾ ಸಮುದ್ರದ ಅಲೆಗ-ಳೊಂದಿಗೆ ಹೋರಾಡಲುಪಕ್ರಮಿಸಿದನು. ಆದರೆ ಇಂದು ಪ್ರಕೃತಿಯ ಸಂಗಡ ಹೊಡೆದಾಡಿ ಗೆದ್ದವರುಂಟೆ? ಅನೇಕ ದಿನಗಳಿಂದಲೂ ವ್ಯಾಯಾಮವಿಲ್ಲದೆ ಇದ್ದ ಆದಿಶೇಷನು ಬಹುಬೇಗ ದಣಿದು ಹೋದನು. ಸಣ್ಣ ಸಣ್ಣ ಸರ್ಪಗಳೇ ಬುಸುಗುಟ್ಟುವಾಗ ದೊಡ್ಡ ಶಬ್ದವನ್ನು ಮಾಡುವಲ್ಲಿ ಆದಿಶೇಷನ ಬುಸುಗುಟ್ಟುವಿಕೆಯಿಂದ ಹುಟ್ಟುವ ಶಬ್ದವನ್ನು ಬಣ್ಣಿಸಲು ಸಾಧ್ಯವೇ ? ಸಮುದ್ರದ ಅಲೆಗಳು ಒಂದರಮೇಲೊಂದು ಹಾಕುವ ಪ್ರತಿಯೊಂದು ಬಡಿತಕ್ಕೂ ಆದಿಶೇಷನ ಶಕ್ತಿಸಾಮರ್ಥ್ಯ, ದೃಢಚಿತ್ತ ಮುರಿಯುತ್ತಾ ಬಂದಿತು. ಕ್ಷಿಪ್ರದಲ್ಲಿಯೇ ಆತನು ಅಲೆಗಳ ಸ್ವಾಧೀನನಾಗಿ ಅವುಗಳ ಇಷ್ಟಾನುಸಾರ ಸಾಗರದ ಮೇಲೆ ಹೊಯ್ದಾಡಲುಪಕ್ರಮಿಸಿದನು.

ಜ್ಞಾನಿಯಾದ ಶ್ರೀ ನಾರಾಯಣನಿಗೆ ಆದಿಶೇಷನ ಬುಸುಗುಟ್ಟುವಿ-ಕೆಯ ರೀತಿಯಿಂದಲೇ ಆತನು ಇನ್ನು ಬಹಳ ಹೊತ್ತು ಅಲೆಗಳ ಪೆಟ್ಟಿಗೆ ನಿಲ್ಲಲಾರನೆಂದು ಹೊಳೆದು ಹೋಯಿತು. ಶ್ರೀ ಲಕ್ಷ್ಮೀದೇವಿಯು ಪತಿಯ ಕಾಲಿನ ತುದಿಯಲ್ಲಿ ನೊದಲಿನಿಂದಲೂ ಕುಳಿತುಕೊಂಡಿದ್ದುದರಿಂದ ಆಕೆಯ ಪಾದಗಳೆರಡೂ ನೀರಿನಲ್ಲಿ ಜೋತು ಬಿದ್ದಿದ್ದವು. ಆದಿಶೇಷನು ಸಮುದ್ರದ ಮೇಲೆ ಹೊಯ್ದಾಡಲುಪಕ್ರಮಿಸಿದಾಗ ಆಕೆ ಅವನ ಬಾಲವನ್ನು ಎರಡೂ ಕೈಗಳಿಂದಲೂ ಹಿಡಿದು ಭದ್ರವಾಗಿ ಕುಳಿತು ಕೊಂಡಿದ್ದರೂ ಸಹ ಆ ಅಲುಗಾಡುವಿಕೆಯನ್ನು ತಡೆಯಲಾರದೆ. ಕಾಲುಗಳೆ-ರಡನ್ನೂ ಮೇಲಕ್ಕೆಳೆದುಕೊಂಡು ಹಿಂದಕ್ಕೆ ಸರಿಯಲು ಮಾಡಿದ ಅನೇಕ

ಪ್ರಯತ್ನಗಳೂ ಸಫಲವಾಗದೆ ಈಗಲೋ ಆಗಲೋ ನೀರಿನಲ್ಲಿ ಬೀಳುವ ಹಾಗೆ ಕಾಣಬರುತ್ತಿದ್ದಳು.

ಇಷ್ಟರಲ್ಲಿ, ಒಂದಾನೊಂದು ಕಾಲದಲ್ಲಿ ಅಟ್ಲಾಂಟಿಕ್ ಮಹಾಸಾಗರದಲ್ಲಿ ವೈರಿ ಹಡಗುಗಳನ್ನು ನಾಶಮಾಡಲು ಜರ್ಮನರು ಎಸೆದ ಒಂದು 'ಜಲಸ್ಫೋಟಕ' ಯಂತ್ರವು ತೇಲುತ್ತಾ ಮುಳುಗುತ್ತಾ ಅಟ್ಲಾಂಟಿಕ್ ಸಾಗರವನ್ನು ದಾಟಿ, ಕ್ಷೀರಸಾಗರವನ್ನು ಪ್ರವೇಶಿಸಿತು. ಅಲೆಗಳು ಆದಿಶೇಷನನ್ನು ಹೇಗೆ ತಳ್ಳಿಕೊಂಡು ಹೋಗುತ್ತಿದ್ದವೋ ಅದೇ ದಿಕ್ಕಿನಲ್ಲೇ ಜಲಸ್ಫೋಟಕ ಯಂತ್ರವನ್ನೂ ಸಹ ತಳ್ಳಿಕೊಂಡು ಬರುತ್ತಿದ್ದವು. ಪ್ರವಾಹದ ಜೊತೆಗೆ ಎರಡು ಬೇರೆ ಬೇರೆ ವಸ್ತುಗಳು ಒಂದುಗೂಡಿ, ಒಟ್ಟಿಗೆ ತೇಲಿ ಹೋಗುವುದು ಸಹಜವಾದುದರಿಂದ ಜಲಸ್ಫೋಟಕ ಯಂತ್ರವು ಬರುಬರುತ್ತಾ ಆದಿಶೇಷನ ತನುವಿಗೆ ಹತ್ತಿಕೊಂಡು ತೇಲುತ್ತಾ ಆತನ ಸುತ್ತಲೂ ಪ್ರದಕ್ಷಿಣೆ ಮಾಡಹತ್ತಿತು. ಕೊನೆಗೆ ಆ ಯಂತ್ರ ಶ್ರೀ ಲಕ್ಷ್ಮೀದೇವಿಯು ಕುಳಿತಿದ್ದ ಭಾಗವನ್ನು ಸಮೀಪಿಸಿ ಆಕೆ ಸುಕೋಮಲವಾದ ಪಾದದ್ವಯಗಳಲ್ಲಿ ಧರಿಸಿರುವ ವಜ್ರ ವೈಡೂರ್ಯದಿಂದ ಕೆತ್ತಿರುವ ರನ್ನದ ಕಾಲುಂಗರ ಗೆಜ್ಜೆಗಳಿಗೆ ಸೋಂಕಿದೊಡನೆ ಕಿವಿಯನ್ನು ಬೇಧಿಸುವಂತಹ ಮಹಾಶಬ್ದದೊಡನೆ ಸಿಡಿಯಿತು. ಒಡನೆಯೇ ನಭೋಮಂಡಲವನ್ನು ಸೀಳಿಕೊಂಡು ಬಂದ ಸ್ತ್ರೀಯ ಚೀತ್ಕಾರವು ಕೇಳಬಂದಿತು.

ತಿರುಗಿ ವಾತಾವರಣದಲ್ಲಿ ವಿಜಯದಿಂದ ತಾನೇತಾನಾಗಿ ಸಂಭ್ರಮದಿಂದ ಕುಣಿಯುತ್ತಿರುವ ಅಲೆಗಳ ಅಪ್ಪಳಿಸುವಿಕೆ ಮತ್ತು ಬಿರುಗಾಳಿಯ ಬೀಸುವಿಕೆಯೇ ಕೇಳಿಬರುತ್ತಿತ್ತೇ ವಿನಾ ಪ್ರಕೃತಿಯಲ್ಲಿ ತುಂಬಿಹೋಗಿರುವ ಇಷ್ಟೊಂದು ಜೀವರಾಶಿಗಳ ಒಂದು ಶಬ್ದ, ಒಂದು ನಗೆ, ಒಂದು ಕೂಗು, ಒಂದು ಚೀತ್ಕಾರ ಯಾವುದೂ ಕೇಳಿಬರುತ್ತಿರಲಿಲ್ಲ. ಎಲ್ಲವೂ ಎಲ್ಲಿಯೋ ಅಡಗಿಹೋಗಿದ್ದವು. ಆದಿಶೇಷನ ಬುಸುಗುಟ್ಟುವಿಕೆಯೂ ನಿಂತುಹೋಗಿತ್ತು.

* * * *

ಪೂರ್ವ ದಿಕ್ಕಿನಲ್ಲಿ ಆಗತಾನೆ ದಿನಕರನು ಮೇಲೇಳಲು ತವಕ-ಪಡುತ್ತಾ ವಾಯುಮಂಡಲ ಎಲ್ಲವನ್ನೂ ಮೋಡವು ಆವರಿಸಿಕೊಂಡಿ-ದ್ದರೂ ಸಹ ಸಮಯ ಸಿಕ್ಕಿದಾಗಲ್ಲೆಲ್ಲಾ ತನ್ನನ್ನು ಜಗತ್ತಿಗೆ ಕಾಣಿಸಿ-ಕೊಂಡು 'ಯುದ್ಧ'ದಲ್ಲಿ ತನಗೇ ಜಯವಾಯಿತೆಂದು ತೋರಿಸಿಕೊಡಲು ಪ್ರಯತ್ನಿಸುತ್ತಿದ್ದನು. ಆದರೆ ಆತನ ಮುಖ ಲಕ್ಷಣದಿಂದಲೇ ಆತನ ವಿಜಯವು ಕ್ಷಣಿಕವಾದುದೆಂದು ಕಂಡುಬರುತ್ತಿತ್ತು. ಮಳೆಯು ನಿಂತು ಹೋಗಿದ್ದರೂ ಆಗಾಗ್ಗೆ ತುಂತುರು ಹನಿಗಳು ಬೀಳುತ್ತಿದ್ದವು. ಮೊದಲೇ ಛಳಿಗಾಲವು ಅತ್ಯಂತ ಉಗ್ರಸ್ಥಿತಿಯನ್ನು ಮುಟ್ಟುವ ಜನವರಿ ತಿಂಗಳು. ಮೇಲಾಗಿ ಮೋಡ ಕವಿದುಕೊಂಡಿದ್ದುದರಿಂದಲೂ, ರಾತ್ರಿಯೆಲ್ಲವೂ ಜೋರಾಗಿ ಮಳೆಯು ಬಿದ್ದು ಪೃಥ್ವಿಯನ್ನು ಶೀತಲ ಮಾಡಿಬಿಟ್ಟಿ-ದ್ದುದರಿಂದಲೂ ಛಳಿಯು ತೀಕ್ಷ್ಣತೆಗೆ ಪ್ರತಿಕೊಟ್ಟಂತಾಗಿದ್ದಿತು. 'ಭರ್' ಎಂದು ಬೀಸುವ ಗಾಳಿಯು ಮೈ ಮುಖಕ್ಕೆ ಸೋಂಕಿದರೆ ಹರಿತವಾದ ಚಾಕುವಿನಿಂದ ಕೊರೆದಂತೆ ನೋವಾಗುತ್ತಿತ್ತು. ಇಂಥ ಸಮಯದಲ್ಲಿ ಮನೆಯಿಂದ ಹೊರಬೀಳುವವರೇ ಕಡಿಮೆ. ಅದರಲ್ಲೂ ಅಲ್ಪಸ್ವಲ್ಪ ಸ್ಥಿತಿ-ವಂತರು, ಫ್ಲ್ಯಾನಲ್ ಸೂಟ್ ಮತ್ತು ಗ್ರೇಟ್ ಕೋಟ್‌ಗಳನ್ನು ಧರಿಸಿ-ಕೊಂಡು ಮನೆಯಿಂದ ಹೊರಗೆ ತಲೆಹಾಕಲು ಶಕ್ಯವಿದ್ದರೂ ಎಂದೂ ಕಾಣದ ಇಂದಿನ ಛಳಿಯಲ್ಲಿ ಮನೆಯ ಒಳಗಡೆ ಇರುವುದೇ ಲೇಸೆಂದು ಬಗೆದು ಬಾಗಿಲು ಕಿಟಕಿಗಳನ್ನು ಭದ್ರವಾಗಿ ಮುಚ್ಚಿಕೊಂಡು ಅಗ್ಗಿಷ್ಟಿಗೆಯ ಮುಂದೆ ಕುಳಿತು ಕೈ ಮೈಗಳನ್ನು ಕಾಯಿಸಿಕೊಳ್ಳುತ್ತಾ ಹರಟೆ ಹೊಡೆಯುತ್ತಿದ್ದರು. ಬಡವ ಬಗ್ಗರಿಗೆ ಈ ಅದೃಷ್ಟವೆಲ್ಲಿಂದ ಬರಬೇಕು? ಛಳಿಯೋ, ಗಾಳಿಯೋ, ಮಳೆ ಬಿದ್ದರೂ ಅವರು ತಮ್ಮ ತಮ್ಮ ಕೆಲಸ-ಗಳಿಗೆ ಹೋಗದಿದ್ದರೆ ಅಂದಿನ ರಾತ್ರಿ ಊಟಕ್ಕೆ ನಾಸ್ತಿಯೇ. ಅದನ್ನು ಅವರು ಚೆನ್ನಾಗಿ ಅರಿತಿದ್ದುದರಿಂದ ಛಳಿಯೆಂಬ ವಿಷಯವನ್ನೇ ತಲೆಯಲ್ಲಿ ತರಲು ಹೆದರಿ ತಮ್ಮನ್ನು ಮರಗಿಡ, ಕಲ್ಲು, ಮಣ್ಣುಗಳೆಂದು ಭಾವಿಸಿಕೊಂಡು ತಮ್ಮ ತಮ್ಮ ಕೆಲಸಗಳ ಮೇಲೆ ಹೋಗುತ್ತಿದ್ದರು. ಹಾಗಿರಲಾಗಿ, ಅಂದು ಇರಾಕ್ ದೇಶದ 'ಅಷಹರ್' ಎಂಬ ಪಟ್ಟಣದ

ಬೀದಿ ಬೀದಿಗಳಲ್ಲಿ ಹರಕು ಚಿಂದಿಗಳನ್ನು ಧರಿಸಿಕೊಂಡು ಬರಿಯ ಕಾಲುಗಳಲ್ಲೇ ತಿರುಗುತ್ತಿರುವವರು ಕಾಣಬರುತ್ತಿದ್ದರೇ ವಿನಹ ಒಬ್ಬ ಸೂಟ್‌ಬೂಟ್‌ಧಾರಿಯ ಸುಳಿವೂ ಇರಲಿಲ್ಲ.

'ಯೂಫ್ರಟೀಸ್'ನದಿಯು ತುಂಬು ಪ್ರವಾಹದೊಡನೆ 'ಅಷಹರ್' ಪಟ್ಟಣದ ಮಗ್ಗುಲಲ್ಲಿ ಹಾದು ಸಮುದ್ರದ ಕಡೆ ಧಾವಿಸುತ್ತಿದೆ. ನದಿಯು ಎರಡೂ ಬದಿಗೂ ಖರ್ಜೂರದ ಗಿಡಗಳು ದೂರದಲ್ಲಿ ಕಣ್ಣು ಕಾಣುವವರೆಗೂ ಸಾಲಾಗಿ ನಿಂತಿವೆ. ನದಿಯಲ್ಲಿ ಅಸಂಖ್ಯಾತ ಸಣ್ಣ ಪುಟ್ಟ ದೋಣಿಗಳು, ಮೋಟಾರ್‌ಬೋಟುಗಳು, ಜಹಜುಗಳು ಅತ್ತ ಇತ್ತ ಓಡಾಡುತ್ತಿವೆ. ಈ ವಾಹನಗಳಿಂದ ಉಂಟಾಗುವ ಸಪ್ಪಳವು ದೂರದವರೆಗೂ ಕೇಳಿಬರುತ್ತಿದೆ. ನೀರಿನ ಮೇಲೆ ಹಗಲು ರಾತ್ರಿಗಳ ತಾರತಮ್ಯವಿಲ್ಲದೆ ವಾಹನಗಳು ಎಡೆಬಿಡದೆ ಚಲಿಸುತ್ತಿರುವುದರಿಂದ ನದಿಯ ನೀರೆಲ್ಲವೂ ಎಣ್ಣೆಮಯವಾಗಿದೆ !

ಅದೊಂದು 'ಹಿಂದುಸ್ಥಾನಿ' ಯೋಧರ ಬಿಡಾರ. ಇಂದು ಭಾನು-ವಾರವಾದುದರಿಂದ ಸಿಪಾಯಿಗಳೆಲ್ಲರೂ ಇನ್ನೂ 'ಕಂಬಳಿ'ಯಲ್ಲೇ ಹುಗಿದು-ಕೊಂಡಿದ್ದಾರೆ. ಕೆಲ ಕೆಲವರು ಆಗಾಗ್ಗೆ ಮೆಲ್ಲನೆ ತಲೆಯನ್ನು ಹೊರಗೆ ಹಾಕಿ, ತಣ್ಣನೆಯ ಗಾಳಿಯು ಮುಖಕ್ಕೆ ಸೋಂಕಿದೊಡನೆ ತಟ್ಟನೆ ಮುಸುಕು ಹಾಕಿಕೊಳ್ಳುತ್ತಿದ್ದಾರೆ. ಉದ್ದಕ್ಕೂ ಇಟ್ಟಿರುವ 'ಚಾರುಪಾಯಿ' ( ಹಗ್ಗದಮಂಚ )ಗಳ ಮೇಲೆ ಬಿದ್ದಿರುವ ಕಂಬಳಿಗಳ ಮುದ್ದೆಗಳು ಹಾಗೊಮ್ಮೆ ಹೀಗೊಮ್ಮೆ ಅಲ್ಲಾಡುತ್ತಿರುವುದನ್ನು ನೋಡಿದರೆ ಎಲ್ಲರೂ ಎದ್ದಿರುವರೆಂದು ತೋರಿಬರುತ್ತಿದೆ. ಆದರೆ ಕಂಬಳಿಯನ್ನು ಬಿಟ್ಟು ಹೊರಗೆ ಬರಲು ಒಬ್ಬರಿಗೂ ಧೈರ್ಯಸಾಲದು.

ಇಷ್ಟರಲ್ಲಿ ಮುಗ್ಗುಲಿನಿಂದ ಒಬ್ಬ ಧಷ್ಟಪುಷ್ಟನಾದ ಸಿಪಾಯಿಯು ಕೈಯಲ್ಲಿ ಕುದಿಯುತ್ತಿರುವ ಚಹದ ಲೋಟವನ್ನು ಹಿಡಿದುಕೊಂಡು ಮೂಲೆ-ಯಲ್ಲಿರುವ ಮಂಚದ ಮೇಲೆ ಹೋಗಿ ಕುಳಿತು ಆದರಮೇಲೆ ಕಂಬಳಿಯ

ಮೂಟೆಯಂತೆ ಅಲ್ಲಾಡದಂತೆ ಬಿದ್ದಿರುವ ವಸ್ತುವನ್ನು ಹಾಗೆ ಹೀಗೆ ಅಲ್ಲಾಡಿಸುತ್ತಾನೆ.

'ಏ! ರಾಮು! ರಾಮು! ಒಂದು ಆಶ್ಚರ್ಯವಾದ ಸಂಗತಿ ನಡೆದಿದೆ ನೋಡೋ! ಆ ನಮ್ಮ ಕುಕ್ ಐ. ಟಿ. (ಅಡಿಗೆಮಾಡುವವ) ನಾರಾಯಣ, ಎಲ್ಲೋ ಪತ್ತೆಯಿಲ್ಲದೆ ಐದುತಿಂಗಳ ಕೆಳಗೆ ಓಡಿಹೋಗಿರಲಿಲ್ಲವೆ, ಆತ ಇವತ್ತು ತಿರುಗಿಬಂದಿದ್ದಾನೆ ನೋಡು.'

'ಅಹಹಾ! ಎಷ್ಟು ದೊಡ್ಡ ಆಶ್ಚರ್ಯದ ಸಂಗತಿ ತಂದೆಯಪ್ಪ. ಅಲ್ಲಕಾಣೋ! ನನಗೊಬ್ಬನಿಗೆ 'ಎಮ್ಮೆಚರ್ಮ'ವಿದ್ದು ಬಿಟ್ಟರೆ ಎಲ್ಲರಿಗೂ ಇದೆ ಅಂತ ತಿಳಿದಿದ್ದೀಯಾ ಹೇಗೆ? ಭಾನುವಾರವಾದರೂ ಸುಖದಿಂದ ಮಲಗಿಕೊಳ್ಳಲು ಹಣೆಯಲ್ಲಿ ಬರೆದಿದ್ದರಲ್ಲವೆ ಅನುಭವಿಸುವುದಕ್ಕೆ! ನಾನಂತೂ ಇವತ್ತೆಲ್ಲಾ ಹಾಸಿಗೆ ಬಿಟ್ಟು ಏಳುವವನಲ್ಲ. ಏನಾದರೂ 'ಚಹ' ತೆಗೆದುಕೊಂಡು ಬಂದು ಕೊಡುವ ಕೃಪೆ ಮಾಡಿದರೆ ಹಾಗೆ ಕುಡಿದು ಬಿಟ್ಟು ಬೆಚ್ಚಗೆ ಮಲಗುತ್ತೇನೆ. ಇಲ್ಲವಾದರೆ ಇಲ್ಲಿಂದ ತೊಲಗಿ ಹೋಗು. ಸುಮ್ಮನೆ ನನ್ನನ್ನು ಕಾಡಬೇಡ.'

'ಏ! ಏ!! ಚಹ ಆರಿಹೋಗುತ್ತೆ ಏಳೋ! ಚಹ ತಂದಿದೇನೆ ನೋಡು.'

ಮೂಟೆಯು ತಟಕ್ಕನೆ ಎದ್ದು ಕುಳಿತು ಚಹವನ್ನು ಕುಡಿಯಲು ಲೋಟವನ್ನು ಕೈಗೆ ತೆಗೆದುಕೊಳ್ಳುತ್ತದೆ.

'ದೇವರೇ! ನಮ್ಮಪ್ಪಾ!! ಮುಂದಿನ ಜನ್ಮದಲ್ಲಿಯಾದರೂ ಈ ನಮ್ಮ ರಾಮುವಿಗೆ ದಿನಾಗಲೂ ಬೆಳಗ್ಗೆ ಎದ್ದ ತಕ್ಷಣ ಚಹದ ಲೋಟವನ್ನು ಕೈಗೆ ಕೊಡುವಂಥ ಹೆಂಡತಿಯನ್ನು ದಯಪಾಲಿಸಪ್ಪಾ! ಹೇ ಆಪದ್ಬಾಂಧವ! ಅನಾಥ ರಕ್ಷಕ'. ಮೇಲೆ ನೋಡಿ, ಕಣ್ಣು ಮುಚ್ಚಿ,

ಬಲಗೈಯಲ್ಲಿ ಸಲಾಮ್ ಹೊಡೆದು ಎಡಗೈಯ್ಯಲ್ಲಿದ್ದ ಲೋಟಕ್ಕೆ ಬಾಯಿಹಚ್ಚಿ, ಗೊಟಕ್ಕನೆ ಚಹವನ್ನು ಕುಡಿಯುವನು.

'ಮುಂದಿನ ಜನ್ಮದಲ್ಲಿ ಯಾಕೋ! ಇದೇ ಜನ್ಮದಲ್ಲಿ ಸಿಕ್ಕು ಬಿಟ್ಟದೆ.'

'ಸುಮ್ಮನಿರೋ ಸಾಕು. ಕಂಡೀದೇನೆ ನಿನ್ನ ಬೇಳಿಕಾಳನ. ಹೆಂಡತೀನ ಕಂಡರೆ 'ಬಾಂಬ್' ಕಂಡಹಾಗೆ ಹಾರಬೀಳತೀಯಾ.'

'ಹಿಂದೂಸ್ಥಾನದಲ್ಲಿ ಅಲ್ಲ ಕಾಣೋ. ಇಲ್ಲೇ.'

'ಓಹೋ! ಹಿಡಿದಿಯೇನು ಯಾವುದಾದರೂ ಬೀಬೀನಾ....ಅರರೆ.... ಲೋ....ಬಿಡೋ ಕುತ್ತಿಗೆ.'

'ಇಂದು ನಮ್ಮ ಲಂಗರ್ (ಅಡಿಗೆ ಮನೆ) ನಲ್ಲಿ ಸ್ವತಃ ಶ್ರೀಮನ್ ನಾರಾಯಣನೇ ಪ್ರತ್ಯಕ್ಷನಾಗಿ ಪ್ರಪಂಚವನ್ನೇ ರಕ್ಷಿಸಲು ಹೋರಾಡುತ್ತಿರುವ ಈ ವೀರ ಭಾರತೀಯ ಸಿಪಾಯಿಗಳಿಗೆ 'ಚಹ'ವೆಂಬ ಅಮೃತವನ್ನು............'

'ನಿನ್ನೆ ಎಲ್ಲಾದರೂ ಜಾಸ್ತಿಯಾಗಿ ಕುಡಿದಿದ್ದೆಯೋ ಹೇಗೆ?'

'ಇದನ್ನೇ ಕಾಣೋ ನಾನು ಅಷ್ಟೊತ್ತಿನಿಂದಲೂ ಆಶ್ಚರ್ಯದ ಸಂಗತೀ ಅಂತ ಹೊಡಕೊಳ್ಳುತ್ತಾ ಇರೋದು. ನಿಜವಾಗಿಯೂ ಶ್ರೀಮನ್ ನಾರಾಯಣನೇ ನಮ್ಮ ಲಂಗರಿನಲ್ಲಿ ಇವತ್ತು ಚಹ ಕೊಡುತ್ತಿದ್ದಾನೆ.'

'ಶ್ರೀಮನ್ನಾರಾಯಣ? ನೀನು 'ಹೊಡೆದುಕೊಳ್ಳೋದು' ನನಗಿನ್ನೂ ಅರ್ಥವಾಗಿಲ್ಲಪ್ಪ.'

'ನಮ್ಮ Cook I. T. ನಾರಾಯಣ ವಾಪಸ್ ಬಂದಿದಾನೆ ಅಂತ ಹೇಳಲಿಲ್ಲವೆ. ಆತ ಏಕ್‌ದಮ್ 'ಚೇಂಜ್' ಆಗಿಬಿಟ್ಟಿದಾನೆ ಕಣೊ.

ಆತ ಹೇಗೆ ಕಪ್ಪಗೆ, ತೆಳ್ಳಗೆ, ಕುಳ್ಳಗೆ, ಇದ್ದ ನೋಡು. ಈಗ ಬಂದಿರುವವನು ಒಳ್ಳೆ ಧಷ್ಟಪುಷ್ಟನಾಗಿ, ಕೆಂಪಗೆ ಇದ್ದಾನೆ. ನೋಡಲಿಕ್ಕೆ ಬಹಳ ಸುಂದರನಾಗಿದ್ದಾನೆ...'

' ಅದೇ ಹೆಸರಿನವರು ಬೇರೆ ಯಾರೂ ಇಲ್ಲವೇನು ? '

' ನಿನಗಂತೂ ಒಂದೂ ತಿಳಿಯುವುದಿಲ್ಲ. ಇವನೇ ಅವನು ಅಂತ 'ಜಮಾದಾರ್' ಕೂಡ ಹೇಳುತ್ತಿದ್ದ. 'ಅಷಹರ್' ಹೊರಗಡೆ ನದಿ ತೀರದಲ್ಲಿ ಕುಡಿದು ಬಿದ್ದಿದ್ದನಂತೆ. ಮಿಲಿಟರಿ ಪೋಲೀಸ್‌ನವರಿಗೆ ಗೊತ್ತಾಗಿ ಅವನನ್ನು ದಸ್ತಗಿರಿ ಮಾಡಿದರಂತೆ. ಅನಂತರ 'ಓಡಿಹೋದ' ತಪ್ಪಿಗಾಗಿ ಅವನನ್ನು 'ಕೋರ್ಟ್ ಮಾರ್ಷಲ್'ಗೆ (ಮಿಲಿಟರಿ ಕೋರ್ಟ್) ಗುರಿಮಾಡಿ, ಮೂರು ತಿಂಗಳು ಕಠಿಣ ಸಜಾ ವಿಧಿಸಿದರಂತೆ. ಸಜ ಮುಗಿಸಿಕೊಂಡು ವಾಪಸ್ ಬಂದಿದ್ದಾನೆ.'

' ಒಳ್ಳೆ ಆಶ್ಚರ್ಯವೇ ಸರಿ.'

' ಅವಕ್ಕೇ ನೀನೂ ನೋಡಿ ಬಾ ಅಂತ ಹೇಳಿದ್ದು. ನಾನು ಅವನನ್ನು 'ನಿಂದು ಯಾವ ಊರಪ್ಪಾ' ಅಂತ ಮೆಲ್ಲಗೆ ಮಾತನಾಡಿಸಿದರೆ ಏನು ಉತ್ತರ ಕೊಟ್ಟ ಅಂತೀಯಾ. 'ನನ್ನ ಊರು ಯಾವುದಾದರೆ ನಿನಗೇನು? ನನ್ನ ಊರು 'ಸ್ವರ್ಗ', ನನ್ನ ಹೆಸರು ' ಶ್ರೀಮನ್ನಾರಾಯಣ ' ಅಂತ ಹೇಳಿದರೆ, ನೀನಾದರೂ ನಂಬುವೆಯೆಂದು ನಾನು ಆಶಿಸುವುದಿಲ್ಲ. ಸುಮ್ಮನೆ ಚಹವನ್ನು ತೆಗೆದುಕೊಂಡು ಹೋಗು ' ಅಂತ ಕಣ್ಣು ಕೆಂಪಗೆ ಮಾಡಿಕೊಂಡು ಸ್ವಚ್ಛ ಕನ್ನಡದಲ್ಲಿ ಹೇಳಿದ. '

' ಎಲ್ಲೋ ಹುಚ್ಚು ಹಿಡಿದಿರಬೇಕು. '

'ಹೌದು. ಅರ್ಧ ಹುಚ್ಚು. ಯಾವುದೋ ಹಳ್ಳಿಯಿಂದ ಬಂದಹಾಗೆ ಕಾಣಿಸುತ್ತದೆ. ಏಂದೂ ಅಡಿಗೆ ಮಾಡಿ ಅಭ್ಯಾಸವಿಲ್ಲ ಅಂತ ತೋರುತ್ತೆ.

ನಾನು ನೋಡು ನೋಡುತ್ತಿರುವಂತೆಯೇ ಮೂರು ಸಲ ಚಹದ ನೀರನ್ನು ಕಾಲುಮೇಲೆ ಚೆಲ್ಲಿಕೊಂಡು ಒದ್ದಾಡಿದ. ನೀನು ಬುದ್ಧಿವಂತ. ಉಪಾಯವಾಗಿ ಅವನನ್ನು ಮಾತನಾಡಿಸಿ ನೋಡು. ಅಂದರೆ ಏನಾದರೂ ಸಂಗತಿ ಹೊರಬೀಳಬಹುದು.'

'ನಾನು ಹೋಗಿ ಮಾತನಾಡಿಸಿಕೊಂಡು ಬರುತ್ತೇನೆ. ನೀನು ಇಲ್ಲೇ ಇರು....ಮತ್ತೇನಾದರೂ ಹೋದ ಭಾನುವಾರದಂತೆ ಕಟ್ಟು ಕಥೆಯನ್ನು ಕಟ್ಟಿ, ನನ್ನನ್ನು ಹಾಸಿಗೆ ಬಿಟ್ಟು ಎಬ್ಬಿಸಿದ್ದೀಯಾ ಅಂತ ಕಂಡು ಬಂದರೆ ನಿನ್ನ ತಲೆಯನ್ನೇ ಒಡೆದು ಬಿಡುತ್ತೇನೆ' ಎಂದು ಕೈಯಲ್ಲಿ ಲೋಟವನ್ನು ಹಿಡಿದು 'ಲಂಗರ್' ಕಡೆ ಧಾವಿಸುವನು.



# ಶ್ರೀಮನ್ನಾರಾಯಣ ಐ. ಟಿ. ಉವಾಚ !

"ಶ್ರೀಮನ್ನಾರಾಯಣರಿಗೆ ನಮಸ್ಕಾರ."

"ನಮಸ್ಕಾರ. ನೀನು ಯಾರಯ್ಯಾ?"

"ನಾನು ಒಬ್ಬ ಹಿಂದೂಸ್ಥಾನಿ ಸಿಪಾಯಿ."

"ಶಹಬಾಸ್! ಶತಮಾನಗಳು ಉರುಳಿ ಹೋದ ಮೇಲಾದರೂ ಹಿಂದೂಸ್ಥಾನಿಗಳು 'ನಾನು ಸಿಪಾಯಿ' ಎಂದು ಅನ್ನಲಿಕ್ಕಾದರೂ ಕಲಿತರಲ್ಲ! ಅಷ್ಟೇ ಸಂತೋಷ."

"ನನ್ನ ವಯಸ್ಸು ಶತಮಾನಗಳಲ್ಲ; ಬರೀ ಇಪ್ಪತ್ತೆರಡು."

"ಓಹೋ, ಬುದ್ಧಿವಂತನೆಂದು ತೋರುತ್ತೀಯೆ. ಏನು ಚಹವನ್ನು ತೆಗೆದುಕೊಳ್ಳಲು ಬಂದಿರುವೆಯಾ? ಕುಳಿತುಕೊ."

"ತಾವು ಇಲ್ಲಿಗೆ ಏಕೆ ದಯಮಾಡಿಸಿದಿರಿ?"

"ನನ್ನ ತಪ್ಪನ್ನು ತಿದ್ದಲು."

"ಛೆ! ತಮ್ಮಂಥಹವರೆಲ್ಲಾದರೂ ತಪ್ಪುಮಾಡುವದುಂಟೆ?"

"ಅಹುದು, ಮಾಡಿರುವೆ. ಅದನ್ನು ಸರಿಪಡಿಸಲು ಮಾರ್ಗವನ್ನು ಹುಡುಕಲೋಸುಗವೇ ಈಗ ಭೂಪ್ರದಕ್ಷಿಣೆಯನ್ನು ಕೈಕೊಂಡಿರುವೆ."

"ತಾವು ಮಾಡಿರುವ ಆ ತಪ್ಪು ಏನೆಂಬುದನ್ನು ನನಗೆ ತಿಳಿಯ-ಕೇಳಬಹುದೆ?"

"ನಾನು ಹೆರವರನ್ನು ನಂಬಿದುದೇ ನನ್ನ ದೊಡ್ಡ ತಪ್ಪು. ನನ್ನ ಜವಾಬ್ದಾರಿಯನ್ನು ಇನ್ನೊಬ್ಬರ ಮೇಲೆ ಹಾಕಿ, ನಾನು ಸುಖಾಭಿಲಾಷಿಯಾಗಿ, ಕ್ಷೀರಸಾಗರದಲ್ಲಿ ನನ್ನನ್ನು ಮುಚ್ಚಿಕೊಂಡುಬಿಟ್ಟೆದ್ದೆ. ನನ್ನಿಂದ ನೇಮಕಮಾಡಲ್ಪಟ್ಟ ದೇವೇಂದ್ರನು ಬಹು ಸಮರ್ಥನೆಂದೂ, ಪ್ರಪಂಚವನ್ನು ಅತಿ ದಕ್ಷತೆಯಿಂದ ಆಳುವನೆಂದೂ ನಾನು ಮಾಡಿಕೊಂಡಿದ್ದ ಕಲ್ಪನೆಯು ತಪ್ಪೇ ಸರಿ. ಈ ಪ್ರಪಂಚದಲ್ಲಿ ದಿನವೂ ನಡೆಯುತ್ತಿರುವ ಆಗು ಹೋಗುಗಳನ್ನು ನನಗೆ ತಿಳುಹಿಸಲೋಸ್ಕರವಾಗಿಯೇ ನೇಮಕ ಮಾಡಲ್ಪಟ್ಟ ಜ್ಞಾನಿಯಾದ ನಾರದಮುನಿಯೂ ಸಹ ಇಷ್ಟು ಅಸಮರ್ಥನೆಂದು ತಿಳಿದಿರಲಿಲ್ಲ. ನನ್ನ ಮೂರ್ಖತನದಿಂದ ಎಷ್ಟೋ ನನ್ನ ಮುದ್ದು ಕಂದಮ್ಮಗಳೂ, ಎಷ್ಟೋ ಕೋಮಲಾಂಗಿಯರೂ, ಹುಡುಗರು, ಯುವಕರು, ಮುದುಕರು ನಾಶವಾಗಿಹೋದರಲ್ಲಾ! ನನಗೆ ಅತ್ಯಂತ ಪ್ರೀತಿಪಾತ್ರವಾದ ತರತರಹದ ಮೂಕಪ್ರಾಣಿಗಳು, ಕೇಳುವವರೇ ದಿಕ್ಕಿಲ್ಲದಂತೆ ನಾಶವಾಗಿಹೋದುವಲ್ಲಾ!! ನನ್ನ ಶ್ರಮದ ಪ್ರತಿಫಲವೆನ್ನುವಂತಿದ್ದ ಎಷ್ಟೋ ಗಿಡಮರ ಬಳ್ಳಿಗಳು ಹೇಳಹೆಸರಿಲ್ಲದೆ ಸುಟ್ಟು ಭಸ್ಮೀಭೂತವಾಗಿಹೋದುವಲ್ಲಾ !!! ಅಯ್ಯೋ, ನಾನು ಇದ್ದೂ ಇದ್ದೂ ಯಾರೂ ಹೇಳುಕೇಳುವವರೇ ಇಲ್ಲದಂತಾಯಿತೆ....? ಎಂಥಹ ಯಾದವೀಕಲಹವಿದು; ಎಂಥಹ ಕ್ರಾಂತಿಯಿದು.''

"ತಾವುಗಳು ಇಷ್ಟು ಬೇಗನೆ ಕಣ್ಣು ತೆರೆದಿದ್ದು ಸಂತೋಷದಾಯಕವಾದ ವಿಷಯವೇ ಸರಿ. ತಮಗೆ ತಮ್ಮ ಜವಾಬ್ದಾರಿಯನ್ನು ಜ್ಞಾಪಿಸಿಕೊಟ್ಟ ಮಹಾನುಭಾವನು ಯಾರು?''

"ಒಂದು ಜಲಸ್ಫೋಟಕ ಯಂತ್ರ. ಪ್ರಯೋಗಿಸಿದವರ ಮನೋಭಿಲಾಷೆಯು ಬೇರೊಂದಿತ್ತಾದರೂ, ಅದರಿಂದುಂಟಾದ ಪರಿಣಾಮವೇ ಬೇರೆ.''

"ಏನು! ಜಲಸ್ಫೋಟಕ ಯಂತ್ರವು ನಿಮಗೆ ತಗುಲಿತೆ?''

"ವತ್ಸ! ನೀನಿನ್ನೂ ಏನೂ ಅರಿಯದ ಹುಡುಗ. ನಾನು ಅಣು, ರೇಣು, ತೃಣಕಾಷ್ಠಗಳಲ್ಲಿ ಅಡಕವಾಗಿರುವೆನೆಂದು ತಿಳಿಯೆಯಾ. ಜಲಸ್ಫೋಟಕ ಯಂತ್ರವು ನಿನಗಾಗಲಿ, ಅಥವಾ ನುತ್ತ್ಯಾರಿಗಾಗಲಿ ತಗುಲಿದರೆ ನನಗೆ ತಗುಲಿದಂತಾಗಲಿಲ್ಲವೆ?"

"ನನ್ನ ಮೂಢತನಕ್ಕೆ ಕ್ಷಮಿಸಿರಿ. ನಾವು, ಇನ್ನು ಮುಂದಾದರೂ ಸುಖದಿಂದ ಇರುವೆವೆಂದು ಆಶ್ವಾಸನ ಕೊಡುವಿರಾ?"

"ಏನು? ಸುಖದಿಂದ ಇರಲು ಬಯಸುವಿಯಾ? ನೀನು ಈಗಲೇ ಏನೆಂದು ಹೇಳಿದೆ? ನಾನು ಒಬ್ಬ (ಹಿಂದೂಸ್ಥಾನದ) ಸಿಪಾಯಿ ಎಂದು ಹೇಳಿದೆಯಲ್ಲವೆ? ಅದನ್ನು ಕೇಳಿ ನನಗೆಷ್ಟೋ ಸಂತೋಷವಾಗಿತ್ತಲ್ಲಾ! ಮಗು, 'ಸಿಪಾಯಿಧರ್ಮ'ವನ್ನು ತಿಳಿದು ಆಚರಿಸುವವನಿಗೆ ಈ ಪ್ರಪಂಚದಲ್ಲಿ ಏನಾದರೂ ಆಶೆಗಳುಂಟೆ? ಅವನೆಂದಾದರೂ ಸುಖಾಭಿಲಾಷಿಯಾಗುವನೆಂದು ಎಣಿಸಿರುವೆಯಾ? ಇದಕ್ಕೆ ಒಂದು ಉದಾಹರಣೆಯನ್ನು ಹೇಳುವೆನು ಕೇಳು. ಹಿಂದೆ 'ರಾವಣ'ನೆಂಬ ಲಂಕಾಧೀಶ್ವರನು, 'ಪಾಶವೀಶಕ್ತಿ'ಯೆಂಬ ಮದದಿಂದ ಕೊಬ್ಬಿದ್ದು, ನನಗೆ ನನ್ನ ಪತ್ನಿಯ ಸಮಾನವಾದಂಥ ಮೂರೂಲೋಕಗಳನ್ನೂ ಗೆದ್ದು, ವಿಶಿಷ್ಟ ಜೀವರಾಶಿಗಳನ್ನೂ ತನ್ನ ಗುಲಾಮರನ್ನಾಗಿ ಮಾಡಿಕೊಂಡು, ಅವರನ್ನು ಅತಿ ದಾರುಣವಾದ ಕಷ್ಟಗಳಿಗೆ ಗುರಿಮಾಡಿದ್ದನು. ಆಗ ನಾನು ರಾಮಾವತಾರವನ್ನು ತಾಳಿ, 'ಸಿಪಾಯಿಧರ್ಮ'ವನ್ನವಲಂಬಿಸಿ, ಆತನನ್ನು ಸುಟ್ಟು ಭಸ್ಮಗೊಳಿಸಿದೆನಷ್ಟೆ. ಅನಂತರದಲ್ಲಿ ನಾನು ಸ್ವಾರ್ಥಿಯಾಗಿ, ಸುಖಾಭಿಲಾಷಿಯಾಗಿ ರಾಜಗದ್ದುಗೆಯನ್ನೇರಿದ ಮೇಲೆ ನಾನು ತಿರುಗಿ ಈ ಲೋಕದಲ್ಲಿ ಪಾಶವೀಶಕ್ತಿಯು ತಲೆಯೆತ್ತದಂತೆ ಮಾಡಬೇಕೆಂದಿದ್ದ ಸಂಕಲ್ಪವೆಲ್ಲವೂ ಮಣ್ಣುಪಾಲಾಯಿತು. ನಾನು ಯಾವ ಧರ್ಮದ ಬಲದಿಂದ ಧನುಸ್ಸನ್ನು ಹಿಡಿದು ಯುದ್ಧದಲ್ಲಿ ಜಯವನ್ನು ಸಾಧಿಸಿದೆನೋ, ಆ ಧರ್ಮದಿಂದಲೇ ಬಾಹಿರನಾದೆನು. ನನಗೆ ಅತ್ಯಂತ ಪ್ರೀತಿಪಾತ್ರ ಸ್ನೇಹಿತನಾದ 'ಆಂಜನೇಯನು' ಪ್ರಪಂಚದ ಕಲ್ಯಾಣಕ್ಕಾಗಿ, 'ತನ್ನದು' ಎಂಬ ಎಲ್ಲ ವಸ್ತುವನ್ನೂ ಆಹುತಿಕೊಟ್ಟು

ಕೊಂಚವಾದರೂ ಸ್ವಾರ್ಥವನ್ನೂ ಬಯಸದೆ, ಅಪ್ರತಿಮಶಕ್ತಿಯಿಂದ ಹೋರಾಡಿ ನನ್ನ ಮಾನವನ್ನುಳಿಸಿದನು. ಆತನು ಇಲ್ಲದಿದ್ದ ಪಕ್ಷದಲ್ಲಿ ನಾನು ಯುದ್ಧಮಾಡಿ ಜಯಶೀಲನಾಗುವುದಿರಲಿ, ಯುದ್ಧವನ್ನು ಕೂಡ ಹೂಡುತ್ತಿದ್ದೆನೋ ಇಲ್ಲವೋ ತಿಳಿಯದಂತಾಗಿದೆ. ರಾವಣನು ಹತನಾಗಿ, ಯುದ್ಧವು ಸಮಾಪ್ತಿಯಾದಮೇಲೆ ಪ್ರಪಂಚವೆಲ್ಲವೂ ಗುಲಾಮಗಿರಿಯಿಂದ ಬಿಡುಗಡೆಹೊಂದಲು ಸಮಸ್ತ ಪ್ರಾಣಿ ವಿಶೇಷಗಳು ಸಂತೋಷದಿಂದ ಹುಚ್ಚೆದ್ದು ಕುಣಿಯುತ್ತಿದ್ದಾಗ ಅವರ ಸಂತೋಷವನ್ನು ದೂರದಿಂದಲೇ ಕಣ್ತುಂಬಾ ನೋಡಿ ನಲಿದನಲ್ಲವೆ; ಇಷ್ಟಕ್ಕೆಲ್ಲಾ ತಾನೊಬ್ಬನೇ ಕಾರಣನೆಂದು ಅವನಿಗೆ ಚೆನ್ನಾಗಿ ಗೊತ್ತಿದ್ದರೂ, ಸ್ವಲ್ಪವಾದರೂ ಸ್ವಾರ್ಥವನ್ನು ಬಯಸಿದನೆಂದು ತಿಳಿದೆಯಾ? ಏನೊಂದನ್ನೂ 'ನನ್ನದು' ಎಂದು ಮುಟ್ಟಲಿಲ್ಲ. ಒಂದು ವಸ್ತುವನ್ನಾದರೂ ಸ್ವೀಕರಿಸಲಿಲ್ಲ. "ನಾನೇನು ಅಂತಹ ದೊಡ್ಡ ಕೆಲಸವನ್ನು ಮಾಡಿರುವೆ? ನನ್ನ ಕರ್ತವ್ಯವನ್ನು ಪೂರೈಸಿ ನನ್ನ 'ಧರ್ಮ'ವನ್ನು ಕಾಪಾಡಿಕೊಂಡೆ. ಇದು ಸ್ವಾರ್ಥವಲ್ಲವೆ? ನನಗೆ ಇದಕ್ಕಿಂತಲೂ ಇನ್ನೇನುಬೇಕು?'" ಎಂದು ಹೇಳಿ, ನಿರ್ದಾಕ್ಷಿಣ್ಯವಾಗಿ ನಾನು ಕೊಟ್ಟ ಬಹುಮಾನಗಳನ್ನೂ ಕೂಡ ನಿರಾಕರಿಸಿಬಿಟ್ಟನಲ್ಲವೆ! ಈತನಲ್ಲವೆ 'ಸಿಪಾಯಿ' ಎಂಬ ಪವಿತ್ರವಾದ ಪದವಿಗೆ ಅರ್ಹನಾದವನು; ಈತನಲ್ಲವೆ ಪೂಜಾರ್ಹನಾದವನು''

"ತಾವುಗಳು ಈ ಮಹಾನುಭಾವನನ್ನು ಹೇಗೆ ಗೌರವಿಸಿದಿರಿ?

''ಆಹಾ! ನಾನು ಯಾವ ಪ್ರಶ್ನೆಯನ್ನು ಎದುರಿಸಲು ಹೆದರುತ್ತಿದ್ದೆನೋ, ನೀನು ಅದನ್ನೇ ಕೇಳಿರುವೆ. ಆಗ, ನಾನು, ಸುಗ್ರೀವ, ವಿಭೀಷಣ ಮುಂತಾದವರು ಬೇರೆ ಬೇರೆ ರಾಜ್ಯಗಳಿಗೆ ಆಶಿಸಪಟ್ಟೆವು. ಸ್ವಾರ್ಥದ ಮಬ್ಬಿನಲ್ಲಿ, ನನಗೆ ಕಣ್ಣು ಇದ್ದೂ ಇದ್ದೂ ಕುರುಡನಾಗಿದ್ದೆ. ನಮ್ಮ ಹೀನ ವರ್ತನೆಗಾಗಿ ಆತನು ತನ್ನ ಮನಸ್ಸಿನಲ್ಲಿ ಏನು ತಿಳಿದುಕೊಂಡನೋ ಏನೋ. ತುಟಿಪಿಟಕ್ಕೆನ್ನದೆ ಎಲ್ಲವನ್ನೂ ಸುಮ್ಮನೆ ನೋಡು-

ತ್ತಿದ್ದನು. ಆಗ ನಾನು ರಾಜ್ಯಕ್ಕೆ ಮನಸೋಲದೆ, ಅವನಿಗೇನಾದರೂ ಪಟ್ಟಕಟ್ಟಿದ್ದ ಪಕ್ಷದಲ್ಲಿ ಭೂಲೋಕದಲ್ಲಿ 'ಪಾಶವೀಶಕ್ತಿ'ಯು ಇನ್ನೊಮ್ಮೆ ತಲೆಯೆತ್ತಲು ಆಸ್ಪದವೇ ಇರುತ್ತಿರಲಿಲ್ಲವಲ್ಲವೆ?''

''ಈಗಲಾದರೂ ನಿಮ್ಮ ತಪ್ಪನ್ನು ಸರಿಪಡಿಸಿರುವಿರಾ?"

''ಸರಿಪಡಿಸಿರುವೆ.''

''ಅದು ಹೇಗೆ?''

"ಸೃಷ್ಟಿಕರ್ತನಾದ ಬ್ರಹ್ಮನನ್ನೂ, ಸಾರ್ವಭೌಮನಾದ ಇಂದ್ರನನ್ನೂ ಅಜನ್ಮ ಕಾರಾಗೃಹಕ್ಕೆ ಗುರಿಮಾಡಿ, ಆ ಎರಡೂ ಅಧಿಕಾರಗಳಲ್ಲಿ ಆಂಜನೇಯನನ್ನು ನೇಮಿಸಿ, ನನ್ನ ತಪ್ಪನ್ನು ಸರಿಪಡಿಸಿರುವೆ. ಬಾಲ-ಬ್ರಹ್ಮಚಾರಿಯಾದ ಆತನು 'ಸ್ವಾರ್ಥ'ಕ್ಕಾಗಲಿ, ಸುಖಕ್ಕಾಗಲಿ ಮನಸೋ-ಲುವುದಿಲ್ಲವೆಂದೂ ಜಗತ್ತಿನಲ್ಲಿ ನಡೆದಿರುವ ಈ ಕ್ರಾಂತಿಯನ್ನು ಬೇಗನೆ ನಾಶಗೊಳಿಸಿ, ಮತ್ತೊಮ್ಮೆ ಶಾಂತಿಯನ್ನು ಸ್ಥಾಪಿಸಿ, ವಿಶಿಷ್ಟ ಜೀವರಾಶಿ-ಗಳೂ, ಸುಖರೂಪವಾಗಿಯೂ ಮತ್ತು ಕ್ಷೇಮದಿಂದಲೂ ಇರುವ ಹಾಗೆ ರಾಜ್ಯಭಾರವನ್ನು ಮಾಡುವನೆಂದು ನನಗೆ ದೃಢವಾದ ನಂಬುಗೆಯಿದೆ."

"ಏನು! ಬ್ರಹ್ಮದೇವನಿಗೂ, ಇಂದ್ರದೇವನಿಗೂ ಅಜನ್ಮ ಕಾರಾಗೃಹ-ವನ್ನು ವಿಧಿಸಿದಿರಾ? ಅವರು ಅಂತಹ ತಪ್ಪನ್ನೇನು ಮಾಡಿದ್ದರು!"

"ಜವಾಬ್ದಾರಿಯುಳ್ಳ ಅಧಿಕಾರದಲ್ಲಿದ್ದು, ದೊಡ್ಡ ತಪ್ಪುಗಳನ್ನು ಮಾಡಿ, ಅದರಿಂದ ಲೋಕಕ್ಕೆ ಹೇಳಬಾರದಷ್ಟು ಹಾನಿಯುಂಟಾಗಲು ಕಾರಣರಾದವರು ಶಿಕ್ಷೆಗೆ ಅರ್ಹರಾದವರಲ್ಲವೆ?"

"ಪಾಪ! ಬ್ರಹ್ಮದೇವನೇನು ಮಾಡಿದ್ದನು?"

"ಭೂಲೋಕದಲ್ಲಿರುವ ವಿಶಿಷ್ಟ ಜೀವರಾಶಿಗಳಲ್ಲಿ ಒಂದನ್ನು ಒಂದರ ವೈರಿಯಾಗಿ ಸೃಷ್ಟಿಸಿ, ಅವುಗಳ ನಡುವೆ ಅಜನ್ಮ ಮತ್ತು ವಂಶ ಪಾರಂಪರ್ಯ-ವಾದ ಹಗೆತನಕ್ಕೆ ಕಾರಣವಾದುದು ಮೊದಲನೆಯ ತಪ್ಪು. ಪ್ರಾಣಿಗಳಲ್ಲಿ

ಶ್ರೇಷ್ಠರಾದ ಮತ್ತು ಬುದ್ಧಿಶಕ್ತಿಯುಳ್ಳವರಾದ ಮನುಷ್ಯರಲ್ಲಿ ಅನೇಕ ಪಂಗಡಗಳನ್ನು ಮಾಡಿ, ಅವರುಗಳು ತಮ್ಮ ತಮ್ಮಲ್ಲೇ ಹಗೆತನವನ್ನು ಬಯಸಿ ಕಾದಾಡುವ ಹಾಗೆ ಮಾಡಿದುದು ಎರಡನೇಯ ತಪ್ಪು. ಅದರಿಂದಲ್ಲವೇ ಇಂದು ಇಷ್ಟು ಅನಾಹುತವು ಜರುಗುತ್ತಿರುವುದು?" .

"ಅದು ಹೇಗೆ?"

"ಇಲ್ಲಿ ನೋಡು. ಹಕ್ಕಿಯು ಹುಳಹುಪ್ಪಡಿಗಳನ್ನು ತಿಂದು ಹೊಟ್ಟೆ ತುಂಬಿಕೊಳ್ಳುತ್ತದೆ; ಅದೇ ಹಕ್ಕಿಯನ್ನು ಬೆಕ್ಕು ತಿನ್ನುತ್ತದೆ; ಬೆಕ್ಕನ್ನು ನಾಯಿ ತಿನ್ನುತ್ತದೆ. ಇದೇ ರೀತಿ ಮನುಷ್ಯನೂ ತನ್ನ ಹೊಟ್ಟೆಗಾಗಿ ಕುರಿ, ಕೋಳಿ, ಮೀನು, ಎಮ್ಮೆ, ದನ, ಹಾವು, ಕಪ್ಪೆ ಮುಂತಾದ ಪ್ರಾಣಿಗಳನ್ನು ಕೊಂದುಕೊಂದು ಹೊಟ್ಟೆಹೊರೆಯುತ್ತಾನೆ. "ಹೊಟ್ಟೆಹೊರೆಯುವುದು" ಎಂಬ ಕಾರಣದಿಂದ ಒಂದು ಪ್ರಾಣಿಯು, ಮತ್ತೊಂದು ಪ್ರಾಣಿಯನ್ನು ತಿನ್ನಲು ಆಸ್ಪದ ಕೊಟ್ಟದ್ದರಿಂದ ಹಿಂಸೆಗೆ ಬಹಿರಂಗವಾಗಿಯೇ ಉತ್ತೇಜನ ಕೊಟ್ಟಂತಾಗಲಿಲ್ಲವೆ. ಇದೇನು ಸಾಮಾನ್ಯವಾದ ತಪ್ಪು ಎಂದು ತಿಳಿಯಬೇಡ. ಅದೂ ಅಲ್ಲದೆ, ಮನುಷ್ಯರಲ್ಲೇ ಕಪ್ಪು, ಬಿಳಿಪು, ಹಳದಿ ಮುಂತಾದ ಅನೇಕ ಪಂಗಡಗಳನ್ನು ಮಾಡಿ ಒಂದು ಪಂಗಡವನ್ನು ಇನ್ನೊಂದು ಪಂಗಡದ ಮೇಲೆ ಎತ್ತಿಕಟ್ಟಿದನಲ್ಲವೆ. ಇದು ಅಕ್ಷಮ್ಯ ಅಪರಾಧ."

"ಇದಕ್ಕಾಗಿ ದೇವೇಂದ್ರನಿಗೇಕೆ ಶಿಕ್ಷೆಯಾಗಬೇಕು?"

"ಯಾವ ರಾಜನು ತನ್ನ ಅಧಿಕಾರವರ್ಗಗಳು ಮಾಡುತ್ತಿರುವ ತಪ್ಪುಗಳನ್ನು ಕಂಡೂ ಕಂಡೂ, ಅವನ್ನು ಸರಿಪಡಿಸದಿರುವನೋ ಅವನು ದಂಡನೀಯನು. ಅಧಿಕಾರವರ್ಗಗಳು ಮಾಡುವ ತಪ್ಪುಗಳಿಂದ ಉಂಟಾಗುತ್ತಿರುವ ಅನರ್ಥವನ್ನು ಕಂಡುಹಿಡಿಯಲು ಅಸಮರ್ಥನಾದವನಂತೂ ರಾಜನೆನಿಸಿಕೊಳ್ಳಲು ಯೋಗ್ಯನೇ ಅಲ್ಲ. ದೇವೇಂದ್ರನು ವಿಷಯಲೋಲುಪನಾಗಿ ತನ್ನ ಕರ್ತವ್ಯವನ್ನು ಸರಿಯಾಗಿ ಮಾಡದೇ ಹೋದನು. ತನ್ನ ರಾಜ್ಯದ ಒಂದು ಭಾಗವಾದ ಈ ಭೂಲೋಕದಲ್ಲಿ ಜರುಗುತ್ತಿರುವ ಅನ್ಯಾಯಗಳನ್ನು ಧ್ವಂಸಮಾಡಲು ಯಾವ ಕಾರ್ಯಕ್ರಮಗಳನ್ನೂ ಕೈಗೊಳ್ಳದೆ

ಇಲ್ಲಿಯ ಜೀವರಾಶಿಗಳು ಸ್ವಚ್ಛಂದ ರೀತಿಯಿಂದ ವರ್ತಿಸಲು ಆಸ್ಪದ ಕೊಟ್ಟನು. ಇದರಿಂದ ಇಲ್ಲಿಯ ಮನುಷ್ಯರು ತಮ್ಮತಮ್ಮಲ್ಲೇ ಸಂಗಡ ಗಳನ್ನು ಮಾಡಿಕೊಂಡು ಒಂದರ ಜೊತೆಗೊಂದು ಹೋರಾಡಲುಪಕ್ರಮಿಸಿವೆ. ಬಲವಾದ ಸಂಗಡಗಳು ಮದದ ಕೊಬ್ಬಿನಿಂದಲೂ ಹೇಳುಕೇಳುವವರಿಲ್ಲದಿದ್ದು ದರಿಂದಲೂ ಸ್ವಾರ್ಥವನ್ನೇ ಮುಂದಿಟ್ಟುಕೊಂಡು ನಿರ್ಬಲವಾದ ಸಂಗಡ- ಗಳನ್ನು ಹೇಳಲಸಾಧ್ಯವಾದ ಕಷ್ಟನಷ್ಟಗಳಿಗೆ ಗುರಿಮಾಡಿದವು. ಒಟ್ಟಿನಲ್ಲಿ ಹೇಳುವದಾದರೆ, ದೇವೇಂದ್ರನು ತನ್ನ ಜವಾಬ್ದಾರಿಯನ್ನು ಅಲಕ್ಷಿಸಿ, ಸುಮ್ಮನೆ ಅಧಿಕಾರಲಾಲಸೆಯಿಂದ ರಾಜನೆನ್ನಿಸಿಕೊಂಡು, ಈ ಕ್ರಾಂತಿಗೆ ಕಾರಣವಾದನು."

"ಇದರಲ್ಲಿ ದೇವೇಂದ್ರನ ತಪ್ಪಿಲ್ಲವೆಂದು ನಾನು ತಿಳಿಯುತ್ತೇನೆ. ಏಕೆಂದರೆ ದೇವತೆಗಳು ಭೂಲೋಕದಲ್ಲಿರುವವರು ತಮಗಿಂತಲೂ ಹೀನರೆಂದೂ, ಭೂಲೋಕಕ್ಕೆ ಬರುವುದೇ ತಮಗೆ ಅವಮಾನಕರವೆಂದೂ ತಿಳಿದಿರುವಾಗ ಇಲ್ಲಿಯ ಆಗುಹೋಗುಗಳು ಅವರಿಗೆ ಗೊತ್ತಾಗುವ ಬಗೆ ಹೇಗೆ? ನನ್ನ ಸ್ವಚ್ಛಂದವೃತ್ತಿಗೆ ಕ್ಷಮೆಯಿರಲಿ."

"ಮಗು! ರಾಜನು ಪ್ರಜೆಗಳ ಕಿಂಕರನು. ಯಾವ ರಾಜನು ತನ್ನ ಪ್ರಜೆಗಳನ್ನು ತನಗಿಂತಲೂ ಹೀನರೆಂದು ತಿಳಿಯುವನೋ ಅವನು ರಾಜಪದವಿಗೇ ತಕ್ಕವನಲ್ಲ. ಮೇಲಾಗಿ ತಾನು ಮೇಲು ಇನ್ನೊಬ್ಬರು ಕೀಳು ಎಂದು ತಿಳಿಯುವವನು ಯಾರೇ ಆಗಲಿ ಈ ಪ್ರಪಂಚದಲ್ಲಿ ಉಸಿರಾ- ಡಲಿಕ್ಕೇ ಯೋಗ್ಯನಲ್ಲ. ಆವನು ತಾನು ಮಿಕ್ಕುಳಿದವರಿಗಿಂತಲೂ ಉತ್ತಮ ನೆಂದು ತಿಳಿಯುವನೋ ಅವನೇ ಎಲ್ಲರಿಗಿಂತಲೂ ಅಧಮನು, ಮೂಢನು. ನೀನು ಉತ್ತಮನೆಂದು ಮತ್ತೊಬ್ಬನು ನಿನ್ನನ್ನು ಗೌರವಿಸಬೇಕೇ ಹೊರತು, ನಿನಗೆ ನೀನೇ ಹಾಗೆ ತಿಳಿದುಕೊಳ್ಳುವುದು ಎಂತಹ ಅಲ್ಪತನ! ನನಗೆ ಎಲ್ಲರೂ ಒಂದೇ; ಎಲ್ಲರೂ ಬೇಕಾದವರೇ. ಆದರೆ ಮಾತ್ರ ನಿರ್ಬಲರಾದವರ ಪರವಾಗಿ ನನಗೆ ಹೆಚ್ಚು ವಾತ್ಸಲ್ಯವಿರುತ್ತದೆ. ಇದನ್ನು ತಿಳಿದೂ ತಿಳಿದೂ ದೇವೇಂದ್ರನು ರಾಜಗದ್ದುಗೆಗೆ ಆಶೆಪಟ್ಟುದುದೇಕೆ? ಅಥವಾ ತಾನು ರಾಜ-

ಪದವಿಯನ್ನು ಸ್ವೀಕರಿಸಿ ತಪ್ಪು ಮಾಡಿದೆನೆಂದು ತಿಳಿದಿದ್ದ ಪಕ್ಷದಲ್ಲಿ ಅನರ್ಥಗಳು ಜರುಗುವುದಕ್ಕಿಂತ ಮುಂಚೆಯೇ ತನ್ನ ಪದವಿಯನ್ನು ಬಿಟ್ಟುಕೊಡಬೇಕಾಗಿತ್ತು. ಅಥವಾ ಇಷ್ಟಕ್ಕಲ್ಲ ದೇವೇಂದ್ರನ ಅಸಮರ್ಥ-ತೆಯೇ ಕಾರಣವಾಗಿದ್ದರೆ ಅದೂ ಒಂದು ತಪ್ಪು. ಏಕೆಂದರೆ ರಾಜನಲ್ಲಿ ಅಸಮರ್ಥತೆಯೇ ಮಹಾಪರಾಧವೆಂದು ತಿಳಿ. ರಾಜ್ಯದಲ್ಲಿ ನಡೆಯುವ ಪ್ರತಿಯೊಂದು ಆಗುಹೋಗುಗಳಿಗೆ ರಾಜನೇ ಹೊಣೆಯಾಗಬೇಕಾಗುತ್ತದೆ.'

"ಆದರೆ ಪ್ರಜೆಗಳು ಮಾಡಿದ ತಪ್ಪುಗಳಿಗೆ ಪ್ರಜೆಗಳು ಹೊಣೆಗಾರ-ರಲ್ಲವೆಂದಾಯಿತಲ್ಲವೆ?"

"ಹಾಗಲ್ಲ. ಪ್ರಜೆಗಳಿಂದ ಉಂಟಾಗಬಹುದಾದ ಅನರ್ಥವನ್ನು ದೂರಾಲೋಚನೆಯಿಂದಲೇ ಕಂಡುಕೊಂಡು ಅದು ನಡೆಯದ ಹಾಗೆ ಕಾರ್ಯಕ್ರಮಗಳನ್ನು ಕೈಕೊಳ್ಳುವುದೇ ರಾಜಧರ್ಮ. ಇನ್ನು ಪ್ರಜೆಗಳು ಮಾಡಿದ ತಪ್ಪುಗಳಿಗೆ ಅವರಿಗೆ ಶಿಕ್ಷೆಯಾಗಬೇಕಾದುದು ಬೇರೆ ಸಂಗತಿ. ವೈಯಕ್ತಿಕ ಹೊಣೆಗಾರಿಕೆಗೆ ಯಾವಾಗಲೂ ಪ್ರಾಧಾನ್ಯವಿದೆ."

"ವೈಯಕ್ತಿಕ ಹೊಣೆಗಾರಿಕೆಯೆಂದರೇನು?"

"ವೈಯಕ್ತಿಕ ಹೊಣೆಗಾರಿಕೆಯನ್ನು ಚೆನ್ನಾಗಿ ತಿಳಿದುಕೊಳ್ಳ ಬೇಕಾದರೆ 'ಪಾಶವೀಶಕ್ತಿ' ಎಂದರೆ ಏನೆಂಬುದನ್ನೂ 'ಸಿಪಾಯಿಧರ್ಮ' ವೆಂದರೆ ಏನೆಂಬುದನ್ನೂ ಅರಿತುಕೊಳ್ಳಬೇಕಾಗುತ್ತದೆ. ಈ ಮೂರೂ ವಿಷಯಗಳು ಒಂದಕ್ಕೊಂದು ಸಂಬಂಧಪಟ್ಟಿವೆ."

"ನನಗೆ ದಯಮಾಡಿ ತಿಳಿಸುವಿರಾ?"

"'ಶಕ್ತಿ'ಯಲ್ಲಿ ಎರಡು ವಿಧಗಳಿವೆ. ಒಂದು 'ದೈವೀಶಕ್ತಿ' ಮತ್ತೊಂದು 'ಪಾಶವೀಶಕ್ತಿ.' ಒಂದು ಒಳ್ಳೆಯ ಕೆಲಸವನ್ನು ಮಾಡಲು ಬೇಕಾಗುವ ಶಕ್ತಿಯು ದೈವೀಶಕ್ತಿಯೆಂದೆನಿಸಿಕೊಳ್ಳುತ್ತದೆ. ಅದೇ ಒಂದು ಕೆಟ್ಟ ಕೆಲಸವನ್ನು ಮಾಡಲು ಉಪಯೋಗಿಸಿಕೊಳ್ಳುವಂಥಹ ಶಕ್ತಿಯು 'ಪಾಶವೀಶಕ್ತಿ'ಯೆಂದು ಹೇಳಲ್ಪಡುತ್ತದೆ. ಉದಾಹರಣಾರ್ಥವಾಗಿ ಒಬ್ಬ

ಮನುಷ್ಯನನ್ನು ತೆಗೆದುಕೊಳ್ಳುವ. ನಾನು ಆತನಿಗೆ ದೇಹದಲ್ಲಿ ಸ್ವಲ್ಪ ಶಕ್ತಿಯನ್ನು ಮತ್ತು ಬುದ್ಧಿಯನ್ನೂ ಕೊಟ್ಟಿದ್ದೇನೆ. ತನ್ನಲ್ಲಿರುವ ಶಕ್ತಿಯನ್ನು ದೈವೀಶಕ್ತಿಯನ್ನಾಗಲೀ, ಇಲ್ಲವೇ ಪಾಶವೀಶಕ್ತಿಯನ್ನಾಗಲೀ ಮಾಡಿಕೊಳ್ಳಲು ಅವನು ಸ್ವತಂತ್ರನು. ಉದಾಹರಣೆಗಾಗಿ ಒಬ್ಬನು ಇನ್ನೊಬ್ಬನ ಕುತ್ತಿಗೆಯ ಮೇಲೆ ಖಡ್ಗವನ್ನು ಎತ್ತಿ ಹೊಡೆಯುತ್ತಾನೆ ಎಂದು ಇಟ್ಟುಕೊಳ್ಳೋಣ. ಇಲ್ಲಿ ಉಪಯೋಗವಾಗುವಂತಹ ಶಕ್ತಿಯು 'ಪಾಶವೀ ಶಕ್ತಿಯು.' ಅದೇ ಇನ್ನೊಂದು ಉದಾಹರಣೆಯನ್ನು ತೆಗೆದುಕೊಳ್ಳುವ. ಒಂದು ನದಿಯಲ್ಲಿ ಒಬ್ಬ ಮನುಷ್ಯನು ಮುಳುಗಿಹೋಗುತ್ತಿರುವುದನ್ನು ದಡದಲ್ಲಿರುವ ಮತ್ತೊಬ್ಬನು ನೋಡುತ್ತಾನೆ: ಕೂಡಲೇ ನದಿಯಲ್ಲಿ ಹಾರಿ ತನ್ನ ದೇಹದಲ್ಲಿರುವ ಶಕ್ತಿಯಿಂದ ಮುಳುಗುತ್ತಿರುವವನನ್ನು ದಡಕ್ಕೆ ಎಳೆದುಹಾಕಿ ಕಾಪಾಡುತ್ತಾನೆ. ಇಲ್ಲಿ ಉಪಯೋಗವಾಗುವಂತಹ ಶಕ್ತಿಯು ದೈವೀಶಕ್ತಿಯು. ದೇಹದಲ್ಲಿರುವ ಶಕ್ತಿಯನ್ನು ದೈವೀಶಕ್ತಿಯನ್ನಾಗಲಿ, ಪಾಶವೀಶಕ್ತಿಯನ್ನಾಗಲಿ ಮಾಡಿಕೊಳ್ಳುವುದು ಮನುಷ್ಯನ ಬುದ್ಧಿಗೆ ಸಂಬಂಧಪಟ್ಟಿದೆ. ಯಾವನು ಸದ್ಗುಣಿಯೂ, ಉದಾರಿಯೂ, ವಿವೇಕಪರನೂ ಆಗಿರುವನೋ ಆತನು ತನ್ನಲ್ಲಿರುವ ಶಕ್ತಿಯನ್ನು ದೈವೀಶಕ್ತಿಯನ್ನಾಗಿ ಮಾಡಿಕೊಳ್ಳುತ್ತಾನೆ. ಯಾವನು ಅಧರ್ಮಿಯೂ, ನೀಚನೂ, ದುರಾಚಾರಿಯೂ, ತಿಳಿಗೇಡಿಯೂ ಆಗಿರುವನೋ ಅವನು ತನ್ನ ಶಕ್ತಿಯನ್ನು ಪಾಶವೀಶಕ್ತಿಯನ್ನಾಗಿ ಮಾಡಿಕೊಳ್ಳುವುದು ಖಂಡಿತ. ಇಂತಹ ಅನೇಕ ವ್ಯಕ್ತಿಗಳು ಸಂಘಟಿಸುವುದು ಸ್ವಾಭಾವಿಕವಾದುದರಿಂದ ಪಾಶವೀಶಕ್ತಿಯ ಪ್ರಾಬಲ್ಯವು ಹೆಚ್ಚಿ, ಜಗತ್ತಿನಲ್ಲಿ ಅನಾಹುತಗಳು ಸಂಭವಿಸುತ್ತವೆ. ಆದುದರಿಂದಲೇ ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಜವಾಬ್ದಾರಿಯನ್ನು ತಿಳಿದುಕೊಳ್ಳಬೇಕೆಂದು ನಾನು ಹೇಳುವುದು. ನಾನು ಯಾವಗ ಇಚ್ಛಿಸುವೆನೋ ಆಗ ಈ ಶಕ್ತಿಯನ್ನು ಹಿಂತೆಗೆದುಕೊಳ್ಳಲು ನನಗೆ ಅಧಿಕಾರವಿದೆಯೆಂಬುದನ್ನು ಮಾತ್ರ ಮರೆಯಬೇಡ.''

"ಇಲ್ಲಿ ಬುದ್ಧಿಶಕ್ತಿಗೆ ಬೆಲೆಯಿದ್ದ ಮೇಲೆ ಇವೆಲ್ಲವೂ ಮನುಷ್ಯನೊಬ್ಬನಿಗೆ ಅನ್ವಯಿಸಲು ಸಾಕು.''

"ಅಹುದು."

"ಆದರೂ ಕೆಟ್ಟ ಮನುಷ್ಯನು ತನ್ನ ಶಕ್ತಿಯನ್ನು ದುರುಪಯೋಗಿಸಿಕೊಳ್ಳುವುದು ಆತನ ತಪ್ಪಲ್ಲವೆಂದೇ ನಾನು ಹೇಳುವೆ. ಏಕೆಂದರೆ ಅವನ ಪ್ರತಿಯೊಂದು ಕಾರ್ಯವೂ ಆತನ ವಿಚಾರಗಳಿಂದ ಹುಟ್ಟಿದೆ; ಮತ್ತು ಪ್ರತಿಯೊಂದು ವಿಚಾರವೂ ಆತನ ಬುದ್ಧಿಶಕ್ತಿಗೆ ಹೊಂದಿಕೊಂಡಿದೆ."

"ಇಲ್ಲಿ ನೀನು ತಪ್ಪಿದೆ. ಒಂದು ಮಗುವು ಹುಟ್ಟಿದಾಗ ಅದಕ್ಕೆ ಜ್ಞಾನವಿರುವುದಿಲ್ಲ. ಕ್ರಮೇಣ ಅದು ದೊಡ್ಡದಾಗುತ್ತ ಬಂದಹಾಗೆಲ್ಲಾ ಕಣ್ಣಿನಿಂದಲೂ, ಕಿವಿಯಿಂದಲೂ ಮತ್ತು ಅನುಭವಗಳಿಂದಲೂ ಜಗತ್ತನ್ನು ಕಂಡುಕೊಂಡು ಜ್ಞಾನವನ್ನುಂಟುಮಾಡಿಕೊಳ್ಳುತ್ತದೆ. ಹೇಗೆ ನಾವು ಕಾದ ಕಬ್ಬಿಣವನ್ನು ಬಡಿದು ಬಡಿದು ನಮ್ಮ ಮನಸ್ಸಿಗೆ ಬಂದಂತೆ ಆಕಾರವನ್ನು ಕೊಡಬಹುದೋ ಹಾಗೆ ಆ ಮಗುವನ್ನೂ ಸಹ ಶಿಕ್ಷಣದ ಮುಖಾಂತರವಾಗಿ ನಮಗೆ ಇಷ್ಟಬಂದಂತೆ ಪರಿವರ್ತಿಸ ಬಹುದು. ಬರುಬರುತ್ತಾ ಜ್ಞಾನವು ಹೆಚ್ಚಿದಂತೆಲ್ಲಾ ವಿಚಾರಗಳು ಉದ್ಭವಿಸುತ್ತವೆ. ಈ ವಿಚಾರಗಳೇ ಮನುಷ್ಯನನ್ನು ಕಾರ್ಯರೂಪಕ್ಕೆ ತರುತ್ತವೆ. ಆದುದರಿಂದಲೇ ನಮ್ಮ ನಮ್ಮ ವಿಚಾರಗಳ ಬಗ್ಗೆ ನಾವು ಎಚ್ಚರಿಕೆಯಿಂದಿರಬೇಕು ಎಂದೆಂಬುವುದು."

"ಕ್ಷಮಿಸಿರಿ. ನಾನೊಂದು ಉದಾಹರಣೆಯನ್ನು ಕೊಡುತ್ತೇನೆ. ಒಬ್ಬ ತಂದೆಯು ತನ್ನ ಹೊಣೆಗಾರಿಕೆಯನ್ನು ಮರೆತು ತನ್ನ ಮಗನಿಗೆ ಶಿಕ್ಷಣವನ್ನೇ ಕೊಡುವುದಿಲ್ಲ. ಮಗನು ಬಾಲ್ಯದಲ್ಲಿ ದುಃಸಹವಾಸಕ್ಕೆ ಬಿದ್ದು, ತಲೆಯಲ್ಲಿ ಕೆಟ್ಟ ವಿಚಾರಗಳನ್ನು ತುಂಬಿಕೊಳ್ಳುತ್ತಾನೆ. ಆ ವಿಚಾರಗಳು ಅವನನ್ನುಕೆಟ್ಟಕೆಲಸಗಳನ್ನು ಮಾಡಲಿಕ್ಕೆ ಹಚ್ಚುತ್ತವೆ. ಇಲ್ಲಿ ಮಗನ ದೃಷ್ಟಿಯಿಂದ ನೋಡಿದರೆ ಅವನದೇನೂ ತಪ್ಪಿಲ್ಲ ತಾನೆ."

"ಹಾಗಲ್ಲ. ತಂದೆಯೇನೋ ತಪ್ಪಿತಸ್ಥ ನಿಜ. ಆದರೂ ಮಗನು ವಯಸ್ಸಿಗೆ ಬಂದಮೇಲೆ, ತನ್ನ ಜವಾಬ್ದಾರಿಯನ್ನು ಕಂಡುಕೊಳ್ಳಬೇಕಾದುದು ಅವನ ಧರ್ಮ."

"ಇನ್ನು ನನಗೆ 'ಸಿಪಾಯಿಧರ್ಮ'ವೇನೆಂಬುದನ್ನು ತಿಳಿಯ ಹೇಳುವಿರಾ? ನನಗೆ ಇಲ್ಲಿಯವರೆಗೆ ಯಾರೂ ಈ ಧರ್ಮದ ಬಗ್ಗೆ ಉಪದೇಶಿಸಿಲ್ಲ. ಆ ಧರ್ಮವನ್ನು ಚೆನ್ನಾಗಿ ತಿಳಿದು ಅದನ್ನು ಸ್ವೀಕರಿಸಲು ಕಾತುರನಾಗಿದ್ದೇನೆ."

"ಧರ್ಮದ ತತ್ವಗಳನ್ನು ಹೇಳಿದರೆ ನಿನಗೆ ಎಲ್ಲವೂ ಅರ್ಥವಾಗಲಿಕ್ಕೆ ಸಾಕು. ಇದನ್ನು ಲಕ್ಷ್ಯಗೊಟ್ಟು ಕೇಳು.

೧. ನೀನು ಗಂಡಸಾಗಲಿ, ಅಥವಾ ಹೆಂಗಸಾಗಲಿ ಹುಟ್ಟಿದಾಗಿನಿಂದಲೂ ನೀನು ಒಬ್ಬ ಸಿಪಾಯಿಯೆಂಬುದನ್ನು ಮರೆಯಬೇಡ.

೨. ನೀನು ಈ ಪ್ರಪಂಚದ ಒಂದು ಅಂಶವಾದುದರಿಂದ ನಿನಗೆ ನಾಶವಿಲ್ಲ; ಆದರೆ ಮಾತ್ರ ನಿನ್ನ ಸ್ವರೂಪವು ಬದಲಾಗಬಹುದು.

೩. ನಿನ್ನ ದೇಹದಲ್ಲಿರುವ ಶಕ್ತಿಯನ್ನು ದುರುಪಯೋಗಿಸಿಕೊಳ್ಳಬೇಡ.

೪. ನಿನಗೆ ಈ ಪ್ರಪಂಚದಲ್ಲಿರುವ ಒಂದೇ ಒಂದು ಕರ್ತವ್ಯವೆಂದರೆ, ಪ್ರಪಂಚದ ಏಳಿಗೆಗೂ ಮತ್ತು ಕ್ಷೇಮಕ್ಕೂ ದುಡಿಯುವುದು.

೫. ಸ್ವಾರ್ಥವನ್ನು ಕನಸು ಮನಸಿನಲ್ಲಿಯೂ ಎಣಿಸಬೇಡ; ಅದು ಒಂದು ಮಬ್ಬು.

೬. ನೀನು ಮಾಡುವ ಪ್ರತಿಯೊಂದು ಕೆಲಸವನ್ನೂ ಎಚ್ಚರಿಕೆಯಿಂದ ಮಾಡು. ಏಕೆಂದರೆ ನಿನ್ನ ಕೈಯಿಂದ ಜರುಗುವ ಒಂದೊಂದು ಕೆಲಸವೂ ವಿಶಿಷ್ಟ ಜೀವರಾಶಿಗಳನ್ನೂ ಅಲ್ಲದೆ, ಈ ಲೋಕವನ್ನೂ ಸಹ ಪರಿವರ್ತಿಸಬಲ್ಲದು.

೭. ಯಾವನಾದರೊಬ್ಬ ವ್ಯಕ್ತಿಯಾಗಲಿ ಅಥವಾ ಒಂದು ಜನಾಂಗವಾಗಲಿ, ತಿಳಿದಾಗಲಿ ಅಥವಾ ಅಜ್ಞಾನದಿಂದಾಗಲಿ ಈ ಪ್ರಪಂಚದ ಕ್ಷೇಮಕ್ಕೆ, ಹಿತಕ್ಕೆ, ಕುಂದುಂಟಾಗುವಂತೆ ವರ್ತಿಸುತ್ತಿದ್ದರೆ,

ಅವರ ವಿರುದ್ಧ ನಿಲ್ಲುವುದು ನಿನ್ನ ಧರ್ಮ. ಅವರನ್ನು ಪರಿವರ್ತಿಸುವುದು ನಿನ್ನಿಂದ ಅಶಕ್ಯವಾದ ಪಕ್ಷದಲ್ಲಿ ಅವರನ್ನು ನಾಶಮಾಡಲೂ ಹಿಂಜರಿಯ-ಬೇಡ. (ಇಲ್ಲಿ ನಾಶವೆಂದರೆ ಸ್ವರೂಪ ಬದಲಾಗುವಿಕೆ.)

೮. ಪಾಶವೀಶಕ್ತಿಯ ಸುಳಿವನ್ನು ಕಂಡ ಕೂಡಲೆ ಅದನ್ನು ಸದೆಬಡಿ.

೯. ದೇಹದಲ್ಲಿ ಉಸಿರಿರುವವರೆಗೂ ಸೋಲನ್ನು ಒಪ್ಪಿಕೊಳ್ಳಬೇಡ.

ಆದುದರಿಂದ ಯುವಕನೇ, ಧರ್ಮದ ಮೊದಲನೆಯ ತತ್ವದಂತೆ ಧರ್ಮವನ್ನು ಸ್ವೀಕರಿಸುವ ಅಥವಾ ಬಿಡುವ ಪ್ರಸಂಗವೇ ಇರುವುದಿಲ್ಲ. ನೀನು ಹುಟ್ಟಿದಾಗಲೇ 'ನೀನು ಸಿಪಾಯಿ' ಎಂದು ಧರ್ಮವು ಹೇಳುತ್ತದೆ. ಆದರೆ ಮಾತ್ರ ಮುಂದೆ ಜ್ಞಾನ ಬಂದ ಮೇಲೆ ಧರ್ಮವನ್ನು ಉಳಿಸಿಕೊಳ್ಳು-ವುದು ಅಥವ ಬಿಡುವುದು ಆ ಸಿಪಾಯಿ ವ್ಯಕ್ತಿಗೆ ಸಂಬಂಧಿಸಿದೆ.

"ನನಗೆ ನಾಶವಿಲ್ಲ ಎಂಬುದರ ಅರ್ಥವು ನನಗಾಗಲಿಲ್ಲ."

"ಈ ಪ್ರಪಂಚವೆಲ್ಲವೂ 'ಪಂಚಭೂತ'ಗಳೆಂಬ ಐದೇಐದು ವಸ್ತುಗಳ ಸಂಯೋಗದಿಂದ ನಿರ್ಮಾಣ ಮಾಡಲ್ಪಟ್ಟಿದೆ; ಅವುಗಳು ಯಾವುವೆಂದರೆ ಮಣ್ಣು, ನೀರು, ಉಷ್ಣ, ಗಾಳಿ ಮತ್ತು ಶೂನ್ಯ. ಆದುದರಿಂದಲೇ ನೀನೂ ಸಹ ಈ ಪ್ರಪಂಚದ ಒಂದು ಅಂಶ. ಆದರೆ ಕಾಲಾಂತರದಲ್ಲಾಗಲಿ ಅಥವಾ ಕಾರಣಾಂತರಗಳಿಂದಾಗಲಿ ನಿನ್ನ ಸ್ವರೂಪವು ಬದಲಾಗಿ, ನಿನ್ನ ದೇಹದಲ್ಲಿರುವ ಪ್ರತಿಯೊಂದು ಅಣುವೂ ತನ್ನ ತನ್ನ ನೈಸರ್ಗಿಕ ರೂಪವನ್ನು ಹೊಂದುತ್ತವೆ. ಆದುದರಿಂದಲೇ ನಿನಗೆ ನಾಶವಿಲ್ಲ ಎಂದು ಹೇಳುವುದು."

"ಇನ್ನು ನಿನಗೆ ಒಬ್ಬ ಸಿಪಾಯಿಯ "ಜವಾಬ್ದಾರಿ"ಯ ಬಗ್ಗೆ ಕೆಲವು ಸಂಗತಿಗಳನ್ನು ತಿಳಿಸುವುದು ಅವಶ್ಯಕ. ಪ್ರತಿಯೊಬ್ಬ ಸಿಪಾಯಿಯೂ ಕಟ್ಟುನಿಟ್ಟಾದ ಶಿಸ್ತಿಗೆ ಒಳಪಟ್ಟಿದ್ದಾನೆ. ನಾನು ಹೇಳಿದ ತತ್ವಗಳಲ್ಲಿ ಯಾವುದೊಂದನ್ನು ಮುರಿದರೂ, ಅವನು "ಧರ್ಮ"ದಿಂದ ಬಾಹಿರನಾಗಿ ಅಧೋಗತಿಗಿಳಿಯುವನು. ಸಿಪಾಯಿಯ ಜವಾಬ್ದಾರಿಗೆ ಬಹಳ ಪ್ರಾಧಾನ್ಯ-

ಸ್ಯವಿದೆ. ಒಟ್ಟಿನಲ್ಲಿ ಹೇಳುವುದಾದರೆ ಆತನಿಗೂ ಪ್ರಪಂಚದ ಕ್ಷೇಮಕ್ಕೂ ನಿಕಟವಾದ ಸಂಬಂಧವಿದೆ. ಉದಾಹರಣಾರ್ಥವಾಗಿ ಈಗ ಈ ಭೂಲೋಕದಲ್ಲಿ ನಡೆದಿರುವ ಯುದ್ಧವನ್ನೇ ತೆಗೆದುಕೊಳ್ಳುವ. ಪ್ರಪಂಚದಲ್ಲಿ ನಡೆದ ಒಂದು ತಪ್ಪಿಗಾಗಿ ಹೇಗೆ ಲೋಕವೆಲ್ಲವೂ ಕಷ್ಟನಷ್ಟಗಳಿಗೆ ಗುರಿಯಾಗಿದೆ ನೋಡು. ಒಂದು ಕೊನೆಯಲ್ಲಿ ಯುದ್ಧವು ನಡೆಯುತ್ತಿದ್ದರೆ ಅದರ ಪರಿಣಾಮವಾಗಿ ಇನ್ನೊಂದು ಕೊನೆಯಲ್ಲಿ ಜನಗಳು ಆಹಾರವಿಲ್ಲದೆ ಸಾಯುತ್ತಿಲ್ಲವೆ? ಇವೆಲ್ಲವೂ ಒಬ್ಬ ವ್ಯಕ್ತಿಯಿಂದುಂಟಾದ ಅನರ್ಥ. ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಜವಾಬ್ದಾರಿಯನ್ನು ಕಂಡುಕೊಂಡು ಎಚ್ಚರಿಕೆಯಿಂದ ವರ್ತಿಸುತ್ತಿದ್ದರೆ ಇದಕ್ಕೆ ಆಸ್ಪದವೇ ಇರುತ್ತಿರಲಿಲ್ಲವಲ್ಲವೆ?

"ಆದುದರಿಂದ "ನಾನು ಹಿಂದೂಸ್ತಾನಿ ಸಿಪಾಯಿ" ಎಂದು ಬಾಯಿಂದ ಹೇಳಿಬಿಟ್ಟರೆ "ಸಿಪಾಯಿ"ಯೆಂಬ ಉಚ್ಚ ಪದವಿಗೆ ಯೋಗ್ಯನಾಗುವುದಿಲ್ಲ. ಅದಕ್ಕಾಗಿ ಅರ್ಹತೆಯನ್ನು ಹೊಂದಲು ದುಡಿಯುವುದು ಪ್ರತಿಯೊಬ್ಬರ ಕರ್ತವ್ಯವಾಗಿದೆ. ನೀನು ಹೆಸರಿಗೆ ಸಿಪಾಯಿಯೇ ಹೊರತು ತತ್ವದ ದೃಷ್ಟಿಯಿಂದ ನೋಡಿದರೆ ನೀನು ಆ ಪದವಿಗೆ ಅರ್ಹನಾಗಲು ಬಹಳ ಶ್ರಮಿಸಬೇಕಾಗಿರುತ್ತದೆ. ನೀನು "ನಾನು ಹಿಂದೂಸ್ತಾನಿ ಸಿಪಾಯಿ" ಎಂದು ಹೇಳಿದುದಕ್ಕಿಂತ "ನಾನು ಸಿಪಾಯಿ" ಎಂದಿಷ್ಟೇ ಹೇಳಿದ್ದರೆ ನನಗೆ ಎಷ್ಟೋ ತೃಪ್ತಿಯಾಗಿರುತ್ತಿತ್ತು."

"ಒಂದು ವಿಷಯದ ಬಗ್ಗೆ ನನಗೆ ಸಂಶಯವಿದೆ."

"ಅದ್ಯಾವುದು?"

"ನಮ್ಮ ಭಾರತದಲ್ಲಿ, ನನಗೆ ಹುಟ್ಟಿದಾಗಿನಿಂದಲೂ "ನೀನು ಹೋದ ಜನ್ಮದಲ್ಲಿ 'ಪಾಪ' ಮಾಡಿರುವುದರಿಂದಲೇ ಈಗ ಭೂಲೋಕದಲ್ಲಿ ಹುಟ್ಟಿರುವೆ; ನೀನು ಇಲ್ಲಿ ಬದುಕುವುದೇ 'ಪಾಪ'; ನೀನು ಹುಟ್ಟಿರುವುದು ದೇವರನ್ನು ಪೂಜಿಸುವುದಕ್ಕಾಗಿ; ಈ ಪ್ರಪಂಚದ ಆಶೆಯನ್ನು ಬಿಟ್ಟುಬಿಡು; ಇದು ನಶ್ವರ; ಯಾವಾಗಲೂ ದೇವರನ್ನು ಭಜಿಸು" ಎಂದೂ ಮುಂತಾಗಿ ಉಪದೇಶಿಸಿದ್ದಾರೆ. ಇದರ ವಿಷಯವಾಗಿ ನೀವೇನೂ ಹೇಳಲಿಲ್ಲವಲ್ಲವೆ?"

"ಈ ರೀತಿಯಾಗಿ ನಿನಗೆ ಉಪದೇಶ ಮಾಡಿದವರು ಮೂಢರು. ಅಂತೆಯೇ ನೀವಿಷ್ಟು ದುರ್ಗತಿಗೆ ಇಳಿದಿದ್ದೀರಿ. ನಾನು ನಿನ್ನಿಂದ ಯಾವ ತರಹದ ಪೂಜೆಯನ್ನೂ ಅಪೇಕ್ಷಿಸುವುದಿಲ್ಲ. ನೀನು ನಿನ್ನನ್ನು "ಒಬ್ಬ ಸಿಪಾಯಿ'' ಎಂದು ಚೆನ್ನಾಗಿ ತಿಳಿದು ನಿನ್ನ ಕರ್ತವ್ಯವನ್ನು ಮಾಡಿದರೆ ನನಗೆ ತೃಪ್ತಿ. "ಒಬ್ಬರು ನನಗೆ ಪ್ರಾರ್ಥನೆ ಮಾಡಬೇಕೆಂದು'' ನಾನು ಇಷ್ಟಪಡುವೆನೆಂದು ಹೇಗೆ ನಿಮ್ಮ ತಲೆಯಲ್ಲಿ ಬಂದಿತೋ ನಾನರಿಯೆ."

"ಇನ್ನು ಜಾತೀಯ ಪ್ರಶ್ನೆ........ ..''

"ಪ್ರಪಂಚದಲ್ಲಿರುವವರೆಲ್ಲರೂ ಸಿಪಾಯಿಗಳು ; ಅವರೆಲ್ಲರೂ ಈ ಪ್ರಪಂಚದ ಒಂದು ಅಂಶ ಎಂದು ಹೇಳಿದ ಮೇಲೆ ಜಾತೀಯ ಪ್ರಶ್ನೆಯಾಗಲಿ ಅಥವಾ ವರ್ಣಭೇದವಾಗಲಿ ಹುಟ್ಟುವ ಬಗೆ ಹೇಗೆ?''

."ನಾನು ನಿಮಗೆ ಅತ್ಯಂತ ಋಣಿಯಾಗಿರುವೆ. ನನಗೆ ಹಿಂದೆ ಯಾರೂ ಈ ತೆರನಾದ ಜ್ಞಾನವನ್ನುಂಟುಮಾಡುವ ಪುಣ್ಯವನ್ನು ಕಟ್ಟಿಕೊಳ್ಳಲಿಲ್ಲ. ನನಗೆ ಬಂದಿರುವ "ಸಿಪಾಯಿ'' ಎಂಬ ಪದವಿಯನ್ನು ದಕ್ಕಿಸಿಕೊಳ್ಳಲು ಶ್ರಮಿಸುವೆ. ನಿಮಗೂ ಮತ್ತು ಮಾತೋಶ್ರೀ ಲಕ್ಷ್ಮೀದೇವಿಯವರಿಗೂ ನನ್ನ ಪ್ರಣಾಮಗಳು.........ಓಹೋ ಮರೆತೆ. ಈಗ ಅವರೆಲ್ಲಿರುವರು?''

"ಮೊನ್ನೆ ಮೊನ್ನೆಯವರೆಗೂ ಲಂಡನ್‌ದಲ್ಲಿದ್ದು ಈಗ ಅಮೇರಿಕಾಕ್ಕೆ ಹೋಗಿರುವರು. ನಿನಗೆ ಜಯವಾಗಲಿ. ಹೋಗಿಬಾ''

[ ಏಪ್ರಿಲ್, ಮೇ ೧೯೪೫, "ಉಷಾ", ಬೆಂಗಳೂರು ]



# ಅದೂ ಯುದ್ಧದ ಸುಳಿಯೊಳಗೆ ಸಿಕ್ಕಿತು!

**ಚಿ**ತ್ರದುರ್ಗದಲ್ಲಿ ಒಬ್ಬ ಗೌಡರ ಮನೆಯಲ್ಲಿ ಒಂದು ಕುರಿಮರಿಯಿತ್ತು. ಸಾಮಾನ್ಯವಾಗಿ ಕುರಿಯು ಕಪ್ಪಾಗಿರುವುದಿಲ್ಲವೆ? ಅದೂ ಕಪ್ಪಗಿತ್ತು. ಚೆನ್ನಾಗಿ ತಿಂದು ದಷ್ಟಪುಷ್ಟವಾಗಿ ದುಂಡಗಿತ್ತು. ಚಿಕ್ಕದಾಗಿರುವಾಗ ಪ್ರತಿಯೊಂದು ಪ್ರಾಣಿ ವಿಶೇಷವೂ ಸುಂದರವಾಗಿರುವುದು ವಿಧಾತನ ನಿಯಮವಷ್ಟೆ. ಅದು ಕೂಡ ನೋಡಲಿಕ್ಕೆ ಒಳ್ಳೇ ಚೆಂದಾಗಿತ್ತು.

ಅದಕ್ಕಿದ್ದ ಕೆಲಸ, ಬೆಳಗ್ಗೆ ಎದ್ದು ದಿನಾಗಲೂ ಬೆಟ್ಟಕ್ಕೆ ಹೋಗುವುದು; ಸಂಜೆಯವರೆಗೂ ಅಲ್ಲಿದ್ದು, ಹೊಟ್ಟೆ ತುಂಬಿಕೊಂಡು, ಮೆಲುಕಾಡಿಸುತ್ತಾ, ಹೊಯ್ದಾಡುತ್ತಾ ಮೆಲ್ಲಗೆ ಮನೆಯನ್ನು ಸೇರುವುದು. ಗೌಡರ ಮಗನು ಬೆಳಗ್ಗೆ ತನ್ನ ಮಂದೆಯನ್ನು ಬೆಟ್ಟಕ್ಕೆ ಒಯ್ಯುತ್ತಿರುವಾಗ, ಈ ಕುರಿಮರಿಯೇ ಎಲ್ಲಕ್ಕಿಂತಲೂ ಮುಂದಾಗಿ, ಪುಟ್ಟ ಪುಟ್ಟ ಹೆಜ್ಜೆಯನ್ನು ಹಾಕುತ್ತಾ, ನೆಗೆಯುತ್ತಾ ಕುಣಿಯುತ್ತಾ ಹೋಗುವುದು, ಸಾಯಂಕಾಲ ಮನೆಗೆ ಬರುವ ವೇಳೆಯಲ್ಲಿ; ಎಲ್ಲಕ್ಕಿಂತಲೂ ಹಿಂದಾಗಿ, ಬೆಟ್ಟವನ್ನು ಬಿಟ್ಟು ಬರಲು ಮನಸ್ಸಿಲ್ಲದಿದ್ದುದರಿಂದಲೋ ಏನೋ, ಮೆಲ್ಲನೆ ಕಾಲೆಳೆದುಕೊಂಡು ಬರುತ್ತಿತ್ತು.

ಅದಿನ್ನೂ ಬಹಳ ಚಿಕ್ಕದಾಗಿದ್ದುದರಿಂದ ಒಂದು ಕುರಿಗೆ ಎಷ್ಟು ಪ್ರಪಂಚದ ಅನುಭವವಿರಬೇಕೋ ಅಷ್ಟು ಇರಲಿಲ್ಲ. ತನ್ನ ಜಾತಿಯ ಪ್ರಾಣಿಗಳಿಗೆ ಯಾವ ವಿಧವಾದ ಅದೃಷ್ಟವು ಕಾದಿದೆಯೆಂಬುದೂ, ತಾನು ಮನುಷ್ಯನ ಗುಲಾಮನೆಂದೂ ಅದಕ್ಕೆ ತಿಳಿಯುವ ಬಗೆಯಾದರೂ ಹೇಗೆ?

ಗೌಡರ ಮನೆಯಲ್ಲಿ ಎಲ್ಲರೂ ಅದನ್ನು ಬಹಳವಾಗಿ ಪ್ರೀತಿಸುತ್ತಿದ್ದರು. ಅಷ್ಟೇ ಏಕೆ ಓಣಿಯಲ್ಲಿರುವ ಸಣ್ಣ ಸಣ್ಣ ಹುಡುಗರಿಂದ ಹಿಡಿದು, ದೊಡ್ಡವರವರೆಗೂ ಅದನ್ನು ಪ್ರೀತಿಯಿಂದ ಕಾಣುತ್ತಿದ್ದರು. ಇದನ್ನು ಅದೂ ತಿಳಿದುಕೊಂಡಿತ್ತು. ಒಮ್ಮೆಯಾದರೂ, ಯಾರೂ ಅದನ್ನು

ಯಾವ ವಿಧವಾದ ಶಿಕ್ಷೆಗೂ ಗುರಿಮಾಡಿರಲಿಲ್ಲ, ಒಮ್ಮೆಯಾದರೂ ಯಾರೂ ಅದನ್ನು ಕಠಿಣ ರೀತಿಯಲ್ಲಿ ನಡೆಸಿಕೊಂಡಿರಲಿಲ್ಲ. ಒಮ್ಮೆ ನಡೆದ ಪ್ರಸಂಗ ಅದರ ಮನಸ್ಸಿನ ಮೇಲೆ ಒಂದು ದೊಡ್ಡ ಪರಿಣಾಮವನ್ನುಂಟುಮಾಡಿತ್ತು. ಒಂದು ದಿನ ಓಣಿಗೆ ಅಪರಿಚಿತವಾದ, ದಷ್ಟಪುಷ್ಟ ನಾಯಿಯೊಂದು ಈ ಕುರಿಮರಿಯು ಓಣಿಯಲ್ಲಿ ಆಟವಾಡುತ್ತಿದ್ದುದನ್ನು ಕಂಡು, ಅದನ್ನು ಬೆನ್ನಟ್ಟಿ ಓಡಿಸಿಕೊಂಡು ಬಂದಿತು. ಅದನ್ನು ಕಂಡಕೂಡಲೇ ಗೌಡರ ನಾಯಿಯು ಕುರಿಮರಿಯ ರಕ್ಷಣೆಗೆ ಧಾವಿಸಿದ್ದು ಒತ್ತಟ್ಟಿಗಿರಲಿ, ಓಣಿಯಲ್ಲಿನ ಬಾಲಕರೆಲ್ಲರೂ ಸೇರಿಕೊಂಡು, ಆ ನಾಯಿಯನ್ನು ಕಲ್ಲುಗಳಿಂದ ಚೆನ್ನಾಗಿ ಹೊಡೆದು, ಕಾಲು ಮುರಿದು ಓಣಿಯಿಂದ ಓಡಿಸಿದ್ದರು.

ಇವೆಲ್ಲ ಕಾರಣಗಳಿಂದ ಅದಕ್ಕೆ ಒಂದು ಕುರುಡು ನಂಬಿಕೆ ಹುಟ್ಟಿಕೊಂಡಿತ್ತು. ಅದು ತಾನು ಒಂದು ಸ್ವತಂತ್ರ ಪ್ರಾಣಿಯೆಂದೂ, ತಾನು ಯಾವ ನಿಯಮಗಳಿಗೂ ಒಳಪಟ್ಟಿಲ್ಲವೆಂದೂ ತಪ್ಪು ತಿಳುವಳಿಕೆಯನ್ನುಂಟುಮಾಡಿಕೊಂಡಿತ್ತು. ಈ ತಿಳುವಳಿಕೆಯೇ ಅದಕ್ಕೆ ಒಂದು ಹೆಮ್ಮೆ ಪಟ್ಟುಕೊಳ್ಳುವ ವಿಷಯವಾಗಿ ಹೋಗಿತ್ತು.

ತನ್ನ ಸುತ್ತಮುತ್ತಲೂ ಏನು ನಡೆಯುತ್ತಿದೆ ಎಂಬುದರ ಗೊಡವೆಗೇ ಅದು ಹೋಗುತ್ತಿರಲಿಲ್ಲ ; ತಾನೆಷ್ಟೋ ತನ್ನ ಪಾಡೆಷ್ಟೋ ಎಂದು ಇದ್ದು ಬಿಟ್ಟಿತ್ತು. ಹೊಟ್ಟೆಯೊಂದು ಹೇಗೋ ತುಂಬಿಬಿಟ್ಟರೆ, ಮಾನವನ್ನು ಮುಚ್ಚುವಷ್ಟು ಬಟ್ಟೆಯಿದ್ದರೆ, ತೃಪ್ತಿಯಿಂದ ಇದ್ದು ಬಿಡುವ ಹಿಂದೂಸ್ಥಾನಿಗಳ ವರ್ಚಸ್ಸು ಅದರ ಮೇಲೂ ಬಿದ್ದಿತ್ತೆಂದರೆ ಅದೇನು ಮಹಾ ಆಶ್ಚರ್ಯ ! ಅದೂ ಹಿಂದೂಸ್ಥಾನದ ಕುರಿಯಲ್ಲವೆ ?

ಬೆಳಗ್ಗಿನಿಂದ ಸಂಜೆಯವರೆಗೂ, ಆಕಾಶಕ್ಕೆ ಹೊಂದಿಕೊಂಡಿರು-ವಂತಿರುವ ಆ ಬೆಟ್ಟದಲ್ಲಿ, (ಆ ಕುರಿ ನೋಡಿದ್ದು ಅದೊಂದೇ ಬೆಟ್ಟ) ಮೈ ಮನಸ್ಸುಗಳಿಗೆ ಹಿತಕರವಾದ ಆ ತಂಪು ಗಾಳಿಯಲ್ಲಿ ತಿನ್ನಲಿಕ್ಕೆ ಬೇಕಾದಷ್ಟು ಇರುವ ಆ ಹಸುರಿನಲ್ಲಿ, ಒಂದು ಕಲ್ಲಿನಿಂದ ಇನ್ನೊಂದು ಕಲ್ಲಿಗೆ ಜಿಗಿಯುತ್ತಾ, ಸಂತೋಷದಿಂದ ಕೇಕೆ ಹಾಕುತ್ತಾ, ತನ್ನ ಜೀವನವನ್ನು ಸಾಗಿಸಿತ್ತು. ಅದಕ್ಕೆ

ಇನ್ನೇನೂ ಬೇಕಾಗಿರಲಿಲ್ಲ. ಅದಕ್ಕೆ ಇನ್ಯಾವ ಆಶೆಯೂ ಇರಲಿಲ್ಲ. ಹಿಂದೂಸ್ಥಾನದಲ್ಲಿರುವ ಮನುಷ್ಯರಂತೆ ಅದೂ ಕೂಡ, ತನ್ನ ಪಾಡಿಗೆ ತಾನು ತೃಪ್ತಿಯಾಗಿ ನೆಮ್ಮದಿಯಿಂದಿತ್ತು.

ಹೀಗಿರುವಲ್ಲಿ ಒಂದು ದಿನ ಯೂರೋಪಿನಲ್ಲಿ ಯುದ್ಧ ಘೋಷಿಸಲ್ಪಟ್ಟಿತು. ಅಂದು ಬೆಟ್ಟವನ್ನೆಲ್ಲಾ ಕಪ್ಪುಮೋಡಗಳು ಆವರಿಸಿಕೊಂಡಿದ್ದವು. ಮಳೆಯು ಬೀಳುವದರಲ್ಲಿತ್ತು. ಮಳೆಯು ಬೀಳುವ ಮುನ್ನ ಬೀಸುವ ತಣ್ಣನೆಯ ಗಾಳಿಯು ಮೈಗೆ ಸೋಂಕಿ,ಮನಸ್ಸಿಗೆ ಆಹ್ಲಾದವನ್ನುಂಟು ಮಾಡುತ್ತಿತ್ತು. ನಮ್ಮ ಕುರಿಮರಿಯು ಆಗ ಬೆಟ್ಟದ ಮೇಲೆ ತಾನೇತಾನಾಗಿ ಕುಣಿಯುತ್ತಿತ್ತು. ಅದಕ್ಕೆ ಇಂದು ಎಲ್ಲೂ ಇಲ್ಲದ ಸಂತೋಷ.ತಾನು ಬದುಕಿರುವುದೇ ಅದಕ್ಕೆ ಒಂದು ಹೆಮ್ಮೆ. ಪಾಪ! ಅದಕ್ಕೇನು ಗೊತ್ತು ಈ ಪ್ರಪಂಚದಲ್ಲಿ ನಡಿಯುತ್ತಿರುವ ಆಗು ಹೋಗುಗಳು! ಪ್ರಪಂಚವೆಲ್ಲವೂ ಯುದ್ಧವೆಂಬ ಸುಳಿಯಲ್ಲಿ ಸಿಕ್ಕು, ದುಃಖವೆಂಬ ಮಡುವಿನಲ್ಲಿ ಮುಳುಗುವುದರಲ್ಲಿರುವದೆಂಬುದು ಅದಕ್ಕೆ ತಿಳಿದಿರಲಿಲ್ಲ. ಅಷ್ಟೇಕೆ ಅದರ ಅದೃಷ್ಟವನ್ನೂ ಸಹ ಹಿಟ್ಲರನು ಬದಲಾಯಿಸಿರುವನೆಂಬುದೂ ಅದಕ್ಕೆ ತಿಳಿದಿರಲಿಲ್ಲ. ಇದನ್ನೆಲ್ಲಾ ಕಟ್ಟಿಕೊಂಡು ಅದಕ್ಕೇನಾಗಬೇಕಾಗಿದೆ. ತನ್ನ ಪಾಡಿಗೆ ತಾನಿರುವುದು ಒಳಿತಲ್ಲವೇ!

ಇದಾದ ಕೆಲವು ದಿನಗಳಲ್ಲೇ, ಯುದ್ಧದ ಬಿಸಿ ಹಿಂದೂಸ್ಥಾನಕ್ಕೂ ತಟ್ಟಿತು. ಸಾಮಾನುಗಳೆಲ್ಲವೂ ಹೇಳಲಾರದಷ್ಟು ತುಟ್ಟಿಯಾದವು. ಬದು-ಕುವುದೇ ಕಷ್ಟವಾಯಿತು. ಲೆಕ್ಕವಿಲ್ಲದಷ್ಟು ಜನ ಹೊಟ್ಟೆಗಿಲ್ಲದೆ,ಸಾಯುವುದಕ್ಕೆ ಶುರುವಾಯಿತು. ಕುರಿಗಳ ಬೆಲೆಯೂ ಮಿತಿಮೀರಿ ಏರಿತು. ಹೆಚ್ಚು ಕುರಿಗಳನ್ನಿಟ್ಟುಕೊಂಡಿದ್ದವರ ರೊಟ್ಟಿ ತುಪ್ಪದಲ್ಲಿ ಬಿತ್ತು.

ಗೌಡರ ಹತ್ತಿರವೂ ಸುಮಾರು ನೂರು ಕುರಿಗಳಿದ್ದವು. ಅವೆಲ್ಲವನ್ನೂ ಮಾರಿಬಿಟ್ಟರೆ ಅವರಿಗೆ ಎಷ್ಟು ಲಾಭವಾಗುತ್ತೆ. ಇಂತಹ ಚಿನ್ನದಂತಹ ಪ್ರಸಂಗವು ಇನ್ಯಾವಾಗಲಾದರೂ ದೊರಕುವುದು ಸಾಧ್ಯವೇ? ಕುರಿಗಳನ್ನು ಯುದ್ಧಕ್ಕೆ ತೆಗೆದುಕೊಂಡು ಹೋಗುವುದೇನೋ ನಿಜ. ಆದಕ್ಕೆ ಅವರೇನು

ಮಾಡಬೇಕು? ಆ ಕುರಿಗಳೇನು ಅವರ ಸಂಸಾರವೆ; ಸಂಸಾರಕ್ಕೆ ಸೇರಿದ ಒಂದು ಸ್ವತ್ತು. ಸಂಸಾರದ ಉಪಯೋಗಕ್ಕಾಗಿ ಅವುಗಳಾಗದಿದ್ದರೆ ಅವುಗಳಿದ್ದಾದರೂ ಪ್ರಯೋಜನವೇನು? ಇದೇನು ಪಾಪಪುಣ್ಯಗಳನ್ನು ನೋಡುವ ಕಾಲವೆ? ಈಗ ಹಿಂದೂಸ್ಥಾನದಲ್ಲಿ ಲೆಕ್ಕವಿಲ್ಲದಷ್ಟು ಜನ ಲಕ್ಷ್ಮೀಪುತ್ರರು ಇದ್ದರೂ, ತಮ್ಮವರೇ ಆದ ಮನುಷ್ಯರೇ ಯುದ್ಧದ ಸುಳಿಯಲ್ಲಿ ಸಿಲುಕಿ, ಒಂದಲ್ಲ ಒಂದು ರೀತಿಯಿಂದ ಸಾಯುತ್ತಿದ್ದರೂ ಸಹ, ಅವರನ್ನು ಕಾಪಾಡಲು ಯಾವ ಪ್ರಯೋಜನಕಾರಿಯಾದ ಉಪಾಯ-ಗಳನ್ನೂ ಕೈಗೊಳ್ಳದೆ ಸುಮ್ಮನೆ ಕೂತಿಲ್ಲವೆ? ಮನುಷ್ಯರದೇ ಈ ಗತಿ ಆಗಿರುವಾಗ ಇನ್ನು ಪ್ರಾಣಿಗಳ ಪಾಡೇನು? ಅಥವಾ ಗೌಡರೇನು ಎಲ್ಲಕ್ಕಿಂತ ಹೆಚ್ಚಿನವರೋ?

ಸರಿ, ಗೌಡರು ಒಂದು ದಿನ ತಮ್ಮ ಕುರಿಮುಂದೆಯನ್ನು ಮಾರಿ ಹಣವನ್ನೆಣಿಸಿಕೊಂಡರು. ಯಾವನೋ ಅಪರಿಚಿತನೊಬ್ಬನು ಕುರಿಮರಿಯನ್ನು ಹಿಡಿದು ಎಳೆವಾಗ ಅದು ಮೊಂಡತನ ಮಾಡಿತು. ಅಪರಿಚಿತನು ಕೈಯ್ಯಲಿದ್ದ ಕೋಲಿನಿಂದ ಎರಡು ಬಲವಾದ ಪೆಟ್ಟುಗಳನ್ನು ಹಾಕಿ, ಅದರ ಕುತ್ತಿಗೆಗೆ ಒಂದು ದಪ್ಪ ಹಗ್ಗವನ್ನು ಬಿಗಿದನು. ಕುರಿಯು, 'ಅಯ್ಯೋ' ಎಂದು ಕಿರುಚಿ, ನೆಲದ ಮೇಲೆ ಕುಕ್ಕುರಿಸಿತು. ಅಪರಿಚಿತನು, ಸ್ವಲ್ಪವೂ ಕರುಣೆಯನ್ನು ತೋರದೆ, ಬಾರಿ ಬಾರಿಗೂ ಅದನ್ನು ಕೋಲಿನಿಂದ ಬಾರಿಸುತ್ತಾ, ದರದರನೆ ಎಳೆದುಕೊಂಡು ಹೊರಟೇಹೋದನು. ಹೋಗುತ್ತಾ ಹೋಗುತ್ತಾ ಕುರಿಯು, ಎರಡೂ ಕಣ್ಣುಗಳಲ್ಲಿ ನೀರು ಧಾರೆಯಾಗಿ ಸುರಿಯುತ್ತಿರಲು, ಗೌಡರ ಮುಖದ ಕಡೆ ನೋಡಿ, ಒಂದೇ ಸಮನೆ ಅರಚುತ್ತಾ ಹೋಯಿತು. ಪಾಪ! ಚಿತ್ರದುರ್ಗದ ಕುರಿಯೂ ಯುದ್ಧದ ಸುಳಿಗೆ ಸಿಲುಕಿತು.

ಇಂದು ಅದೇ ಕುರಿ ರೈಲು ಡಬ್ಬಿಯಲ್ಲಿ ನಿಂತಿದೆ. ಒಂದು ಗುಂಡು-ಸೂಜಿಗೂ ಜಾಗವಿಲ್ಲದಷ್ಟು ಕುರಿಗಳು ಆ ಡಬ್ಬಿಯಲ್ಲಿ ತುಂಬಲ್ಪಟ್ಟಿವೆ. ಎಲ್ಲ ಕುರಿಗಳೂ ಒಂದೇ ಸಮನೆ ಅರಚುತ್ತಿವೆ, ಆದರೆ ನಮ್ಮ ಕುರಿ ಮಾತ್ರ ಸುಮ್ಮನೆ ಒಂದು ಕೊನೆಯಲ್ಲಿ ನಿಂತುಕೊಂಡು, ನಟ್ಟ ಕಣ್ಣಿನಿಂದ ಬೈಟ್ಟವನ್ನೇ

ನೋಡುತ್ತಾ ಒಂದೇ ಸಮನೆ ಕಣ್ಣೀರು ಸುರಿಸುತ್ತಿದೆ. ತನ್ನ ಜೀವನವನ್ನೇ ಬದಲಾಯಿಸಿ ಬಿಟ್ಟಿದ್ದು ಎಂಥಹ ಪ್ರಸಂಗವೋ ಅದಕ್ಕೆ ಗೊತ್ತಿಲ್ಲ. ಆದರೆ, ತಾನು, ತನಗೆ ಅತ್ಯಂತ ಪ್ರೀತಿ ಪಾತ್ರವಾದಂಥ ಬೆಟ್ಟವನ್ನು ಬಿಟ್ಟು ಹೋಗುತ್ತಿರುವೆನೆಂಬುದು ಮಾತ್ರ ಅದಕ್ಕೆ ತಿಳಿದಿತ್ತು. ರೈಲು ಹೊರಟಿತು, ರೈಲಿನ ವೇಗವು ಜಾಸ್ತಿಯಾದಂತಲ್ಲಾ, ತನ್ನ ಸಂಗಡಿಗರ ರೋದನವು ಹೆಚ್ಚಿದಂತೆಲ್ಲಾ ನಮ್ಮ ಕುರಿಮರಿಯ ಕಣ್ಣೀರಿನ ಪ್ರವಾಹವು ಜಾಸ್ತಿ-ಯಾಯಿತು. ಕಾಣುವ ವರೆಗೂ, ಎಗರಿ ಎಗರಿ ಬೆಟ್ಟವನ್ನು ನೋಡುತ್ತಿದ್ದು, ಬೆಟ್ಟವು ಕಣ್ಮರೆಯಾದ ಕೂಡಲೇ, ಕಣ್ಣು ಮುಚ್ಚಿ ನೆಲಕ್ಕೆ ಕುಸಿದು ಬಿದ್ದಿತು.

ರೈಲು ಬೊಂಬಾಯಿಗೆ ತಲುಪಿ ಇನ್ನೂ ಅರ್ಧ ಘಂಟೆಯಾಗಿರಲಿಲ್ಲ. ನಮ್ಮ ಕುರಿಯು ಇತರ ಸಂಗಡಿಗರೊಂದಿಗೆ, ಹಡಗಿನಲ್ಲಿ ತುರಕಲ್ಪಟ್ಟಿತು. ಹತ್ತು ದಿನಗಳ ವರೆಗೂ, ಸೆಕೆಯಲ್ಲಿ ಒದ್ದಾಡಿ, ಹಸುವಿನಿಂದಲೂ ನೀರಡಿಕೆ-ಯಿಂದಲೂ ನರಳಾಡಿ, ದೇವರನ್ನು ಬಯ್ದು, ಮನುಷ್ಯರನ್ನೂ ಹಳಿದು, ಸಮುದ್ರಯಾನವನ್ನು ಮುಗಿಸಿಕೊಂಡು, ಇರಾಕಿನಲ್ಲಿ ಬಂದಿಳಿಯಿತು.

ಇರಾಕಿನಲ್ಲಿ ಬಂದ ಹದಿನೈದು ದಿನಗಳ ನಂತರ ಆ ಕುರಿಯನ್ನು (ಇಷ್ಟರಲ್ಲೇ ಅದು ಮರಿಯಿಂದ ಕುರಿಯಾಗಿತ್ತು) ಇನ್ನೂ ನಾಲ್ಕು ಸಂಗಡಿಗರೊಂದಿಗೆ, ಹಿಂದುಸ್ಥಾನಿ ಯೋಧರ ದಳವೊಂದಕ್ಕೆ ಆಹಾರವಾಗಿ ಕಳುಹಿಸಲ್ಪಟ್ಟಿತು. ಬಿಡಾರಕ್ಕೆ ಬಂದು ಮುಟ್ಟಿದ ಮರುಘಳಿಗೆಯಲ್ಲಿಯೇ, ಭಯಂಕರ ದಾಡಿಯುಳ್ಳ ಸಿಕ್ಕರವನೊಬ್ಬನು, ಕೈಯಲ್ಲಿ ಒಂದು ಹರಿತವಾದ ಮಚ್ಚನ್ನು ಹಿಡಿದು, ಆ ಕುರಿಗಳಷ್ಟನ್ನೂ ಒಂದು ಕೊನೆಗೆ ದಬ್ಬಿಕೊಂಡು ಹೋಗಿ ಒಂದಾದಮೇಲೆ ಒಂದರಂತೆ ಕಡಿಯಲುಪಕ್ರಮಿಸಿದನು. 'ಖಚ್....ಬ್ಯಾ' 'ಖಚ್....ಬ್ಯಾ'

ಇಷ್ಟರಲ್ಲಿ ಆ ದಳದ ಮುಖ್ಯಾಧಿಪತಿಯು, ಆ ಕಡೆಯಿಂದ ಎಲ್ಲಿಗೋ ಸಾಗಿದ್ದವನು, ತನ್ನ ಬಾಂಧವರ ಸಂಹಾರವನ್ನು ನೋಡುತ್ತಾ, ಮೌನವಾಗಿ ಅಳುತ್ತಾ, ತಲೆಯನ್ನು ತಗ್ಗಿಸಿ, ಕುತ್ತಿಗೆಯ ಮೇಲೆ ಮಚ್ಚಿನ ಏಟನ್ನು ನಿರೀಕ್ಷಿಸುತ್ತಾ ಕಡೆಯದಾಗಿ

ಉಳಿದಿದ್ದ ನಮ್ಮ ಕುರಿಯನ್ನು ನೋಡಿದನು. ಕುರಿಯ ಅದೃಷ್ಟದಿಂದಲೋ ಏನೋ, ಅವನಲ್ಲಿ ಏನೋ ಒಂದು ತರಹ ಭ್ರಾತೃ ಪ್ರೇಮವು ಅಂಕುರಿಸಿತು. ಕೂಡಲೇ ಅವನು ಧಾವಿಸಿ ಹತ್ತಿರ ಬಂದು, ಆ ಕುರಿಯನ್ನು ತಾನು ಸಾಕುವದಾಗಿ ಹೇಳಿ, ಅದನ್ನು ತಾತ್ಕಾಲಿಕವಾಗಿಯಾದರೂ ಮರಣದಿಂದ ತಪ್ಪಿಸಿ, ತನ್ನ ಸಂಗಡಲೇ ಕೊಂಡು ಹೋದನು. ಈ ಕಾರಣದಿಂದ ಆ ದಳವು ಅಂದು ಬರೀ ನಾಲ್ಕು ಕುರಿಗಳಲ್ಲೇ ತೃಪ್ತಿ ಪಟ್ಟುಕೊಳ್ಳಬೇಕಾಯಿತು..

ಈಗ ನಮ್ಮ ಕುರಿಯು, ಬಿಡಾರದಲ್ಲಿ ನಿರ್ಭೀತಿಯಿಂದ ತಿರುಗುತ್ತಿದೆ. ಅದನ್ನು ಎಲ್ಲರೂ 'ಮುಖ್ಯ ದಳಪತಿಯ ಕುರಿ' ಎಂದು ಸಂಬೋಧಿಸುತ್ತಾ ಸೆಲ್ಯೂಟ್ ಹೊಡೆದು ಹಾಸ್ಯ ಮಾಡುತ್ತಾರೆ. ಒಬ್ಬರು ಒಬ್ಬರನ್ನು ಹಾಸ್ಯ ಮಾಡುವಾಗ, ಹಾಸ್ಯ ಮಾಡುವವನು, ಹಾಸ್ಯ ಮಾಡಿಸಿಕೊಳ್ಳುವವನಿಗಿಂತ ಉತ್ತಮನೆಂದು ತಿಳಿಯುವುದು ಸ್ವಾಭಾವಿಕವಲ್ಲವೆ? ಆದರೆ ನಮ್ಮ ಕುರಿಗೆ ಇದ್ಯಾವುದರ ಪರಿವೆಯೂ ಇಲ್ಲ. ಅದಕ್ಕಿದ್ದ ಒಂದು ಚಿಂತೆಯೆಂದರೆ, ಎಂದು ತಾನು ತನ್ನ ಬೆಟ್ಟಕ್ಕೆ ಹೋಗುವೆನೋ,ಎಂದು ಬೆಟ್ಟದಲ್ಲಿ ತಾನೇತಾನಾಗಿ ನಿರ್ಭಿಢೆಯಿಂದ, ನಿರ್ಭೀತಿಯಿಂದ ಕುಣಿಯುವೆನೋ ಎಂಬುದೇ. ಅದು ಯಾವಾಗಲೂ.ಬೆಟ್ಟದ ವಿಷಯವಾಗಿ ಯೋಚಿಸುತ್ತಾ, ಅನೇಕ ಕಟ್ಟು ಕಥೆಗಳನ್ನು ನಿರ್ಮಿಸಿಕೊಂಡು ಕಣ್ಣೀರು ಸುರಿಸುತ್ತಿತ್ತು. ಇರಾಕಿನಲ್ಲಿ ದೂರದವರೆಗೂ ಬಿದ್ದಿರುವ ಮರಳನ್ನು, ತಾನು ಹಿಂದೆ ಇದ್ದ ಹಸುರಿನಿಂದ ತುಂಬಿರುವ ಬೆಟ್ಟದ ಜೊತೆಗೂ, ಇರಾಕಿನಲ್ಲಿ ಹಗಲು ರಾತ್ರಿಗಳೆನ್ನದೆ ಬೀಸುತ್ತಿರುವ ಕುದಿಯುವ ಗಾಳಿಯನ್ನು ತಾನು ಹಿಂದೆ ಇದ್ದ ಬೆಟ್ಟದಲ್ಲಿ ಯಾವಾಗಲೂ ಬೀಸುತ್ತಿರುವ ತಂಪನೆಯ ಗಾಳಿಗೂ, ಹೋಲಿಸಿ ಹೋಲಿಸಿ ಅಳುತ್ತಿತ್ತು. ಸದ್ಯಕ್ಕೆ ತಿನ್ನಲಿಕ್ಕೆ ಸಿಗುತ್ತಿರುವ ರೊಟ್ಟಿಜೋಳಿಯನ್ನು ಬಿಟ್ಟು, ತನ್ನದೇ ಆಹಾರವಾದ ಎಳೆಯ ಗರಿಕೆಯನ್ನೇ ಮೇಯುತ್ತಿದ್ದ ಹಾಗೆ ಹಗಲೂ ರಾತ್ರಿಯೂ ಭ್ರಾಂತಿ ಪಡುತ್ತಿತ್ತು. ಅಂತೂಇಂತೂ ಕುರಿಯು ದುಃಖವೆಂಬ ಕಾಳ್ಗಿಚ್ಚಿನಲ್ಲಿ ಸಿಕ್ಕು, ಚಡಪಡಿಸುತ್ತಾ, ಬಿಡುಗಡೆಯ ದಿನವನ್ನೇ ನಿರೀಕ್ಷಿಸುತ್ತಾ ಜೀವನವನ್ನು ಸಾಗಿಸಿತ್ತು. ಬದುಕಿನ ದಿನಗಳನ್ನು ಎಣಿಸುತ್ತಿತ್ತು.

ಹೀಗಿರುವಲ್ಲಿ ಇರಾಕಿನಲ್ಲಿ ಆಗ ಕಳ್ಳಕಾಕರ ಹಾವಳಿಯು ಬಹಳ ವಾಗಿತ್ತು. ಯುದ್ಧದಿಂದುಂಟಾದ ಭೀಕರ ಪರಿಣಾಮದಿಂದ, ಸುಗಮವಾದ ರೀತಿಯಲ್ಲಿ ಬದುಕನ್ನು ಸಾಗಿಸಲು ಅಸಾಧ್ಯವಾಗಿರಲು, ಮುಂದುಗಾಣದೆ, ಜನರು ಕಳ್ಳತನಕ್ಕೆ ನಿಂತಿದ್ದರು. ಈ ಕಳ್ಳರ ಕಾಟವು ಎಷ್ಟು ಹೆಚ್ಚಿತ್ತೆಂದರೆ, ಮಾರಕ ಯಂತ್ರಗಳಿಂದ ಸುಸಜ್ಜಿತರಾಗಿ ಯುದ್ಧ ಮಾಡಲು ಅಲ್ಲಿಗೆ ಹೋದ ಯೋಧರೂ ಕೂಡ, ಇವರ ಹಾವಳಿಯಿಂದ ಸುರಕ್ಷಿತವಾಗಿರಲಿಲ್ಲ. ಒಂದು ದಿನದ ಮಾತು; ಒಬ್ಬ ಆಫೀಸರ್ ತನ್ನ ಗುಡಾರದಲ್ಲಿ ಮಲಗಿದ್ದವನು, ಬೆಳಿಗ್ಗೆ ಎದ್ದು ನೋಡಲಾಗಿ ಗುಡಾರವೂ ಇರಲಿಲ್ಲ ಹೊದೆದಿದ್ದ ಕಂಬಳಿಯೂ ಇರಲಿಲ್ಲ, ಕೊನೆಗೆ ತಾನು ಹಾಕಿಕೊಂಡಿದ್ದ ಪೈಜಾಮವೂ ಇರಲಿಲ್ಲ! ರಾತ್ರಿಯಲ್ಲಿ ಕಳ್ಳರು ಎಲ್ಲವನ್ನೂ ಲೂಟಿ ಮಾಡಿಬಿಟ್ಟಿದ್ದರು ಅವರಿಗೆ ಬೇಕಾದ ವಸ್ತುವು ಇಂತಹದೇ ಎಂದಿರಲಿಲ್ಲ. ಏನು ಸಿಕ್ಕಿದರೆ ಅದು. ಟೈರುಗಳು, ಬಂದೂಕಗಳು, ಸಿಡಿಮದ್ದುಗಳು, ಮೋಟಾರ್‌ಗಳು, ಬಟ್ಟೆಗಳು, ಗುಡಾರಗಳು, ಆಹಾರ, ಕೊನೆಗೆ ಹರಕು ಬೂಟು ಚಪ್ಪಲಿಗಳನ್ನೂ ಸಹ ಕದ್ದುಕೊಂಡು ಹೋಗುತ್ತಿದ್ದರು. ಯುದ್ಧಕಾಲದಲ್ಲಿ ಎಲ್ಲವೂ ಬೇಕಾಗಿದ್ದವು; ಎಲ್ಲ ವಸ್ತುಗಳಿಗೂ ಬೆಲೆಯಿತ್ತು.

ಇದರ ಪರಿಣಾಮವಾಗಿ, ರಾತ್ರಿ ಎಂಟು ಘಂಟೆಯ ಮೇಲೆ ಯೋಧರ ಬಿಡಾರಗಳ ಸುತ್ತಲೂ ಪಹರೆಯನ್ನು ಇಟ್ಟರು. ಮತ್ತು ಎಂಟು ಘಂಟೆಯ ಮೇಲೆ ಯಾರೇ ಆಗಲಿ, ಬಿಡಾರದಲ್ಲಾಗಲಿ, ಅಥವಾ ಬಿಡಾರದ ಸುತ್ತ-ಮುತ್ತಲಾಗಲಿ ಕಂಡುಬಂದರೆ, ಅವರನ್ನು ನಿಲ್ಲಿಸಿ, ಅವರನ್ನು ಪರೀಕ್ಷಿಸ-ಬೇಕೆಂದೂ, ತಪ್ಪಿಸಿಕೊಳ್ಳಲು ಪ್ರಯತ್ನಪಟ್ಟರೆ, ಗುಂಡು ಹೊಡೆದು ಕೊಲ್ಲಬೇಕೆಂದೂ ಸುಗ್ರೀವಾಜ್ಞೆ ಜಾರಿಯಲ್ಲಿ ಬಂದಿತು. ಆ ಕಾರಣದಿಂದ ರಾತ್ರಿ ಎಂಟು ಘಂಟೆಯ ಮೇಲೆ ಪಹರೆಯವರ ಹೊರತು, ಎಲ್ಲರೂ ಬೇಗನೆ ಮಲಗಿಬಿಡುತ್ತಿದ್ದರು. ರಾತ್ರಿಯಲ್ಲಿ ಜಲಬಾಧೆಗ್ಗಾಗಲಿ ಅಥವಾ ಇನ್ನ್ಯಾವ ಅನಿರೀಕ್ಷಿತ ಕಾರಣಗಳಿಂದಾಗಲಿ, ಗುಡಾರಗಳಿಂದ ಹೊರಗೆ ಬರಲೇ ಬೇಕಾದರೆ, ಬಹಳ ಎಚ್ಚರಿಕೆಯಿಂದ ಬರಬೇಕಾಗಿತ್ತು. ಪಹರೆಯ-

ವರು, ಯಾರಾದರೂ ತಿರುಗುತ್ತಿರುವುದು ಕಂಡು ಬರುತ್ತಿದ್ದರೆ, 'ಹಾಲ್ಟ್ ಹು ಕಮ್ಸ್ ದೇರ್' (ಯಾರು ಬರುತ್ತಿರುವವರು ನಿಲ್ಲು) ಎಂದು ಮೂರು ಸರತಿ ಕೂಗಬೇಕೆಂದೂ, ಆ ಬರುತ್ತಿರುವವನು ಯೋಧನಾಗಿದ್ದರೆ "ಫ್ರೆಂಡ್" (ಸ್ನೇಹಿತ) ಎಂದು ಜವಾಬು ಕೊಟ್ಟು, ಪಹರೆಯವರು ಪರೀಕ್ಷಿಸಿದ ಮೇಲೆ ತಮ್ಮ ಗುಡಾರಕ್ಕೆ ಹೋಗಬೇಕೆಂದೂ ನಿಯಮವಿತ್ತು. ಕಳ್ಳರಾಗಿದ್ದರೆ ಓಡಿಹೋಗಲು ಪ್ರಯತ್ನಿಸುವುದು ಸ್ವಾಭಾವಿಕ ತಾನೆ?

ಒಂದು ರಾತ್ರಿ ಕಗ್ಗತ್ತಲೆ ಕವಿದಿತ್ತು. ಒಂದು ನಕ್ಷತ್ರವಾದರೂ ಕಂಡು ಬರುತ್ತಿರಲಿಲ್ಲ. ಅಂದು ಏಕೋ ನಮ್ಮ ಕುರಿಗೆ ನಿದ್ರೆ ಬಾರದೆ, ತಲೆಯಲ್ಲಿ ಒಂದೇ ಸಮನೆ ಸುಳಿಯುವ ವಿಚಾರಗಳಿಂದ, ತಲೆಯು ಕಾದು ಸುಡುತ್ತಿರಲು, ಬಿಡಾರದಲ್ಲಿ ಅತ್ತಲಿಂದ ಇತ್ತಲಾಗಿ ಇತ್ತಲಿಂದ ಅತ್ತಲಾಗಿ ತಿರುಗುತ್ತಾ ಚಿಂತೆಯ ಭಾರವನ್ನು ಕಡಿಮೆ ಮಾಡಿಕೊಳ್ಳಲು ಪ್ರಯತ್ನಪಡುತ್ತಿತ್ತು. "ಮನುಷ್ಯರು ಮಾಡುವ ತಪ್ಪುಗಳಿಂದ ಪ್ರಪಂಚದಲ್ಲಿ ಉಂಟಾಗುವ ಭೀಕರ ಪರಿಸ್ಥಿತಿಯಲ್ಲಿ, ನಾವು ಭಾಗಿಯಾಗಿ ಕಷ್ಟಪಡಬೇಕು. ಇವರ ಕೃತ್ಯಗಳಿಂದ ನಮ್ಮ ಪ್ರಾಣಕ್ಕೆ ಸಂಚಕಾರ ಬಂದಮೇಲೆ, ಇವರುಗಳಿಂದ ನಮ್ಮನ್ನು ಕಾಪಾಡಿಕೊಳ್ಳಲು ನಾವು ಪ್ರಯತ್ನಿಸಬೇಕಲ್ಲವೆ? ಎಲ್ಲಿಯ ತನಕ ನಮ್ಮ ಜಾತಿ ಹೀಗೆ ಬಲಿಯಾಗುತ್ತಿರಬೇಕು?" ಕುರಿಯ ಯೋಚನಾ ತರಂಗಗಳು ಒಂದೇ ಸಮನಾಗಿ ಸಾಗಿತ್ತು. ಪಾಪ! ಅದಕ್ಕೇನು ಗೊತ್ತು 'ಅಂತರ್ ರಾಷ್ಟ್ರೀಯ ಜವಾಬ್ದಾರಿ' ಎಂದರೆ ಏನೆಂಬುದು.

ಪಹರೆಯವನಿಗೆ ಏನೋ ಒಂದು ಕರಿಯ ಬಣ್ಣದ ವಸ್ತು ಹೋಗುತ್ತಿರುವ ಹಾಗೆ ಕಾಣಿಸಿತು. ಕಗ್ಗತ್ತಲೆಯಲ್ಲಿ ಯಾವುದು ಎಂಬುದನ್ನು ಊಹಿಸುವಷ್ಟೂ ಕಾಣಬರುತ್ತಿರಲಿಲ್ಲ. ಇವನು ಅದನ್ನು ಕರಿಯ ಕಂಬಳಿಯನ್ನು ಹೊದೆದ 'ಇರಾಕಿ'ಯೆಂದೇ ತಿಳಿದು ಒಮ್ಮೆಲೇ ಬಂದೂಕವನ್ನು ಎತ್ತಿ ಗುರಿಯಿಟ್ಟು, "ಯಾರವರು ನಿಲ್ಲು, ಯಾರವರು ನಿಲ್ಲು' ಎಂದು ಎರಡು ಸಲ ಕೂಗಿದನು. ಕುರಿಯು ನಿಲ್ಲಲಿಲ್ಲ. ಮೂರನೆಯ ಸಲವೂ ಕೂಗಿದನು;

ಕುರಿಯು ನಿಲ್ಲಲಿಲ್ಲ. ಒಡನೆಯೇ 'ಘಡಲ್- ಘಡಲ್' ಎಂದು ಎರಡು ಸಾರಿ ಬಂದೂಕಿನ ಸಪ್ಪಳವು ಕೇಳ ಬಂದಿತು. ಕರಿಯ ಕಂಬಳಿಯ ಇರಾಕಿಯು, ನರಗಳಲ್ಲಿ ನಡುಕವನ್ನು ಹುಟ್ಟಿಸುವಂಥಹ "-ಬ್ಯಾ" ಎಂಬ ಶಬ್ದದೊಡನೆ, ಕೆಳಗೆ ಬಿದ್ದನು.

ಕುರಿಯು ಸತ್ತು ಶಾಂತಿಯನ್ನು ಪಡೆಯಿತು, ಬಂಗಾಲದ ಬರಗಾಲದಲ್ಲಿ ಸತ್ತ ಹಿಂದೂಸ್ಥಾನಿಗಳ ಹಾಗೆ.

( ಫೆಬ್ರುವರಿ ೧೯೪೫, 'ಪ್ರಜಾಮತ' ಬೆಂಗಳೂರು )



# ಯುದ್ಧರಂಗದಲ್ಲಿ ಒಂದು ರಾತ್ರಿ!

## — ಪಾತ್ರಗಳು —

| | | |
|---|---|---|
| ರಾವ್ | ಕರ್ನಾಟಕಿ | ಆಧುನಿಕ ವಿಚಾರದವ |
| ಕಪೂರ್ | ಪಂಜಾಬಿ | ಜಾರ |
| ಹರಿಸಿಂಗ್ | ಯು. ಪಿ. | 'ಮಡಿ....ಮಡಿ' |
| ಗಣಪತಿ ಐಯ್ಯರ್ | ಮದ್ರಾಸಿ | ಕುಡುಕ |
| ಸೇನ್ | ಬೆಂಗಾಲಿ | ಒಣಪ್ರತಿಷ್ಠೆ |
| ದಾಸ್ | ಅಸಾಮಿ | ತಲೆತಿರುಕ |
| ಪಂಡಿತ್ | ಬಿಕಾನೀರಿ | ದೂರ್ವಾಸ |
| ರಹಿಮಾನ್ | ಮುಸಲ್ಮಾನ್ | ಪಾಕಿಸ್ಥಾನಿ |
| ಅಜೀತ್ ಸಿಂಗ್ | ಸಿಕ್ | '........' |

ದೃಶ್ಯ: ಏಳನೆಯ ನಂಬರಿನ ಡೇರೆ
ಹೊತ್ತು: ರಾತ್ರಿ ೧೧–೪೫
ಸ್ಥಳ: ಇರಾಕ್ ಮರುಭೂಮಿ
ಕಾಲ: ಡಿಸೆಂಬರ್ ತಿಂಗಳು; ಬಹಳಛಳಿ; ಮಂಜುಕವಿದಿದೆ

ಬೇಕಾದ ಸಾಮಾನುಗಳು:-ಒಂಬತ್ತು ಜನರ ಹಾಸಿಗೆ ಹೊದಿಕೆಗಳು, ಒಂಬತ್ತು ಹಗ್ಗದ ಮಂಚಗಳು, ಒಂಬತ್ತು ಸೊಳ್ಳೆ ಪರದೆಗಳು (ಮಿಲಿಟರಿ ತರಹದ್ದು; ಚಿಕ್ಕವು) ಒಂದು ಚೆಂಬು, ಒಂದು ಸೊಳ್ಳೆಪರದೆ; ಅದರಲ್ಲಿ ಒಂದು ದೊಡ್ಡ ರಂಧ್ರವಿರಬೇಕು.

(ತೆರೆಯು ಮೇಲೇಳುವುದು. ಒಂಭತ್ತು ಹಗ್ಗದ ಮಂಚಗಳು, ನಾಲ್ಕು ರಂಗಮಂಚದ ಆ ಕಡೆಗೂ, ನಾಲ್ಕು ಈ ಕಡೆಗೂ ಮಧ್ಯೆ ಒಂದೂ

ಇಟ್ಟಿರುವುದು ಕಂಡುಬರುತ್ತದೆ. ಕಿಷ್ಕಿಂದಾಪಟ್ಟಣ. ನಡುವೆ ಇಟ್ಟಿರುವ ಲಾಂದ್ರ ಸಣ್ಣಗಿರುವುದರಿಂದ ಮುಸುಕು ಮುಸುಕಾಗಿದೆ. ಏಳು ಮಂಚಗಳ ಮೇಲೆ ಕಟ್ಟಿರುವ ಸೊಳ್ಳೆ ಪರದೆಗಳೊಳಗೆ ಒಂದೊಂದು ಕಂಬಳಿಯ ಗಂಟು ಬಿದ್ದಿರುವ ಹಾಗೆ ಕಂಡು ಬರುತ್ತದೆ. ಸೊಳ್ಳೆ ಪರದೆಗಳ ಒಂದು ಕೊನೆ ಡೇರೆಯ ಗೋಡೆಗೆ ಕಟ್ಟಿ, ಮತ್ತೊಂದು ಕೊನೆ ಮಂಚಗಳಿಗೇ ಜೋಡಿಸಲ್ಪಟ್ಟಿದೆ. ಸೊಳ್ಳೆ ಪರದೆಗಳನ್ನು ಬರಿಯ ಹೆಸರಿಗೇ ತೂಗುಹಾಕಿರುವುದರಿಂದ ಗುಡಾರದ ಎಲ್ಲ ಭಾಗವೂ ಕಂಡುಬರುತ್ತಿದೆ. ಪ್ರೇಕ್ಷಕರ ಮುಂದೆಯೇ ಇರುವ ಎರಡು ಇದುರುಬದರು ಮಂಚಗಳಲ್ಲಿ ಬಲಗಡೆ ಇರುವ ಮಂಚಕ್ಕೆ ಸೊಳ್ಳೆ ಪರದೆಯನ್ನೇನೋ ಕಟ್ಟಿಲ್ಲ. ಆದರೆ ಕಂಬಳಿಯ ಗಂಟೊಂದು ಮಂಚದ ಮೇಲೆ ಬಿದ್ದಿರುವ ಹಾಗೆ ಕಂಡುಬರುತ್ತದೆ. ಎಡಗಡೆಯಿರುವ ಮಂಚವು ಖಾಲಿಯಿದ್ದರೂ ಸೊಳ್ಳೆ ಪರದೆ ಕಟ್ಟಲ್ಪಟ್ಟಿದೆ.

ಛಳಿಯ ದೆಸೆಯಿಂದ ಆಗಾಗ್ಗೆ 'ಹಾ.... ಹಾ....ಹೂ....ಹೂ' ಎಂಬ ಶಬ್ದಗಳು ಕೇಳಿಬರುತ್ತಿವೆ.)

ಗಣಪತಿ ಐಯ್ಯರ್—(ಕುಡುಕ, ಒಮ್ಮೆಲೇ ಎದ್ದು ಕರ್ಕಶ ಧ್ವನಿಯಲ್ಲಿ ಗಟ್ಟಿಯಾಗಿ ಹಾಡಲು ಶುರು ಮಾಡುತ್ತಾನೆ.)

'ಕಾಮೀ ಸತ್ಯಭಾಮಾ

ಕದವ ತೆರಪ್ಪಾಯಿ'

ರಾವ್—ಅಲಲೆ! ಸಾಕುಮಾಡೋ ನಿನ್ನ ಸಂಗೀತ! ಹತ್ತು ಘಂಟೆ ಆದ ಮೇಲೆ 'ಲೈನ್ 'ನಲ್ಲಿ ಗಲಾಟೆ ಮಾಡಕೂಡದು ಅಂತ 'ಹುಕುಮ್' ಜಾರಿಯಲ್ಲಿದೆ 'ಅಂಬೋದು ಗೊತ್ತದನೋ ಇಲ್ಲವೊ....ರಾಮ ರಾಮ! ಈ ಕುಡುಕರು,ಜಾರರು ಇವರುಗಳ ಸಹವಾಸದಿಂದ ಯಾವಾಗ ಪಾರಾಗತೇನೋ ದೇವರೇ ಬಲ್ಲ. (ಗಣಪತಿ ಐಯ್ಯರ್ ಒಂದು ಸಲ ಸುಮ್ಮನೆ'ರಾವ್'ನನ್ನು ದೃಷ್ಟಿಸಿ ಬಿದ್ದುಕೊಳ್ಳುವನು) ಯುದ್ಧ ಮುಗಿತದೋ ಇಲ್ಲೋ ಅದೂ ಸಹ ದೇವರಿಗೇ ಗೊತ್ತಿರಲಿಕ್ಕೆ ಸಾಕು. ಇವರ ಸಂಗಡ ಬಾಳುವೆ ಮಾಡುವದಕ್ಕಿಂತ ಸತ್ತಾರ ಹೋಗುವುದು ಉತ್ತಮ. ಸಾಲದುದಕ್ಕೆ

'Tent Commander ನ್ನ ಜೇರೆ ಮಾಡ್ಯಾರ ನನ್ನ! ಯಾರಿಗೆ ಬೇಕಾಗಿದೆ ಈ ಕಮ್ಯಾಂಡ್ರಿ? ಛಲೋ ನಿದ್ದಿಯಾರ ಮಾಡೋಣ ಅಂದರೆ ಅದೂ ಕೂಡ ನನ್ನ ಹಣೇಲಿ ಬರೆದಿಲ್ಲ. (ಖಾಲಿ ಮಂಚದ ಕಡೆನೋಡಿ) ಅರರೆ! ಕಪೂರ್ ಇನ್ನೂ ಬಂದಿಲ್ಲಲ್ಲ! ನನಗೆ ಗೊತ್ತು ಇವರ ಚಾಳಿ. ಗಿಣಿಗೆ ಹೇಳಿದ ಹಾಗೆ ಎಷ್ಟು ಹೇಳಿದೆ 'ಇವತ್ತು ಹತ್ತರೊಳಗೇ ಬಂದು ಬಿಡಪ್ಪಾ, ಇಲ್ಲದಿದ್ದರೆ ನನ್ನ ಕುತ್ತಿಗ್ಗೇ ಬರುತ್ತೆ' ಅಂತ. ನನ್ನ ಮಾತನ್ನು ಕೇಳಿದರಲ್ಲವೇ? ನಾನು ಭೋಳೇ ಮನುಷ್ಯ. ಯಾರ ಮೇಲೂ 'ರಿಪೋರ್ಟ್' ಮಾಡೊಲ್ಲ ಅಂತ ಎಲ್ಲರಿಗೂ ಗೊತ್ತು. ಅದಕ್ಕೇ ಇವರೆಲ್ಲಾ ತಮ್ಮ ಮನಸ್ಸು ಬಂದ ಹಾಗೆ ಮಾಡತಾರೆ. ಪಾಪ! ಅನ್ಯಾಯವಾಗಿ ಯಾಕೆ ಶಿಕ್ಷೆ ಕೊಡಿಸಬೇಕು; ಹೇಗ್ಗಾದರೂ ಸರಿಹೋಗಿಸಿಕೊಂಡು ಕಷ್ಟ ಸುಖಗಳನ್ನು ತಳ್ಳಿಕೊಂಡು ಹೋಗೋಣ ಅಂದರೆ ಹೀಗೆ ಮಾಡತೀರಾ? ಸರಿ! ನಾಳೆ ಎದ್ದ ತಕ್ಷಣ 'ರಿಪೋರ್ಟ್' ಮಾಡೇಬಿಡತೀನಿ. ಆದದ್ದೆಲ್ಲಾ ಆಗಿಹೋಗಲಿ. (ಸೊಳ್ಳೆ ಪರದೆ ಇಲ್ಲದೇ ಇದ್ದ ಮಂಚದ ಕಡೆ ನೋಡಿ) ಅಯ್ಯಯ್ಯೋ! ಏ ದಾಸ್ಯ! ಯಾಕಲೇ ಸೊಳ್ಳೆ ಪರದೆ ಕಟ್ಟಿಲ್ಲ? ನನ್ನ ಕೊಲ್ಲಬೇಕೂಂತ ಮಾಡಿದೀರಾ ಹೇಗೆ? ಅಂತೂ ನನ್ನ ತಲೆಗೆ ಸಂಚಕಾರ ತರತಾರೆ ಆತು. ಮಾತಾರ ಆಡತಾನ? ಹ್ಯಾಂಗಾರ ಆಡೀಯಪ್ಪಾ! ನಿಮಗೆ ಬೇಕು ದಂಡಾ (ಕೈತೋರಿಸುತ್ತಾ) ದಂಡಾ ಅಂದೆ! ಬಾಪರೆ ಬಾಪ್! ಇವರು ಸೊಳ್ಳೆ ಪರದೆ ಕಟ್ಯಾರೋ ಇಲ್ಲೋ, ಇವರು ಬಂದು ಮಲಗ್ಯಾರೋ ಇಲ್ಲೋ, ಇವರು ಪರೇಡ್‌ನಲ್ಲಿ ಹಾಜರಿದಾರೋ ಇಲ್ಲೋ, ಇವರು ಸ್ನಾನ ಮಾಡಿದಾರೋ ಇಲ್ಲೋ, ಇವರು ಹಜಾಮತ್ ಮಾಡಿಕೊಂಡಿದಾರೋ ಇಲ್ಲೋ, ಅಂಬೋದೆಲ್ಲಾ ನನ್ನ ತಲೆಗೇ ಕಟ್ಟೇದಾರಲ್ಲಾ ಅಂತೀನಿ! ನನಗೂ ಒಳ್ಳೇ ಪದವೀನೆ ಸಿಕ್ಕಿತು! ಆ ತೆಳ್ಳಗಿನ, ಕುಳ್ಳಗಿನ, ಕಪ್ಪನೆಯ "ಜಮಾದಾರ್" ಬಂದ ಅಂದರೆ ನನ್ನ ಮೇಲೇ ಹಾರಾಡತಾನೆ. ಎದ್ದಾರಃ ಏಳೋ! ಈಗಾದರೂ ಸೊಳ್ಳೆ ಪರದೆ ಕಟ್ಟು.

ದಾಸ್—(ಎದ್ದು ಕೂತು) ನನಗೆ ಎಷ್ಟು ವರ್ಷ ಅಂತ ತಿಳಿದಿದೀಯಾ?

ರಾವ್—ಅಹಾ! ಸೊಳ್ಳೆ ಪರದೆ ಕಟ್ಟೋ ಅಂದರೆ ವಯಸ್ಸು ಕೇಳುತ್ತಾ ಕೂತುಕೊಂಡ! ನೀನೂ ಸಹ ಕುಡಿದಿದ್ದೀಯಾ ಹೇಗೆ? (ಗಣಪತಿ ಐಯ್ಯರ್ ಒಮ್ಮೆಲೇ ಹ....ಹ....ಹ ಎಂದು ನಗುವನು) ಮುಚ್ಕೋ ಬಾಯಿ.

ದಾಸ್—(ತನ್ನ ಹಠವನ್ನೇ ಸಾಧಿಸುತ್ತಾ) ನನಗೆಷ್ಟು ವಯಸ್ಸು ಮೊದಲು ಹೇಳು.

ರಾವ್—ಯಾಕೆ, ಇಪ್ಪತ್ತಾರು ಅಂತ ನೀನೆ ಮೊನ್ನೆ ಮೊನ್ನೆ ಹೇಳುತಿದ್ದೆಯಲ್ಲೊ.

ದಾಸ್—ನಾನು ಮಿಲಿಟರಿಗೆ ಸೇರಿ ಎಷ್ಟು ವರ್ಷ ಆಯಿತು?

ರಾವ್—ಮೂರು ವರ್ಷವಿರಬಹುದು.

ದಾಸ್—ಸರಿ. ಅಂದಮೇಲೆ ನಾನು ಮಿಲಿಟರಿಗೆ ಸೇರುವುದಕ್ಕಿಂತ ಮುಂಚೆ, ಇಪ್ಪತ್ಮೂರು ವರ್ಷ ಬದುಕಿದ್ದೆ ಅಂತ ಅರ್ಥ ಆಯಿತೋ ಇಲ್ಲೋ?

ರಾವ್—ಹೀಗ್ಯಾಕೆ ಹುಚ್ಚು ಹುಚ್ಚು ಮಾತಾಡಲಿಕ್ಕೆ ಹತ್ತಿದಿಯೊ?

ದಾಸ್—ನನ್ನ ಮಾತನ್ನಾರ ಸ್ವಲ್ಪ ಕೇಳಪ್ಪಾ. ಇಪ್ಪತ್ಮೂರು ವರ್ಷ ಸೊಳ್ಳೆ ಪರದೆ ಕಟ್ಟದೆ, ಅದೂ ಸೊಳ್ಳೆಗಳ ತವರು ಮನೆಯಾದ 'ಅಸಾಂ' ದೇಶದಲ್ಲಿ ವಾಸಿಸುವ ನಾನು, ಇನ್ನೂ ಇಷ್ಟು ಖಂಡತುಂಡ-ನಾಗಿದ್ದೀನಿ ಅಂದ ಮೇಲೆ ಈ ಇರಾಕಿ ಬಡಕಲು ಸೊಳ್ಳೆಗಳು ನನಗೇನಾರಾ ಮಾಡ್ಯಾವೂ ಅಂತ!

ರಾವ್—ಅದೆಲ್ಲಾ ಸರಿ. ಆದರೆ ಒಂದು ಹುಕುಮ್ ಜಾರಿಗೆ ಬಂದ ಮೇಲೆ ಅದನ್ನು ಪಾಲಿಸುವುದು ನಿನ್ನ ಕರ್ತವ್ಯ. ಸೊಳ್ಳೆ ಪರದೆಯನ್ನು ಕಟ್ಟುವುದರಿಂದ ನಿನ್ನ ದೇಹಕ್ಕೆ ಸೌಖ್ಯವೊ ಅಥವಾ ಸರ್ಕಾರದ ದೇಹಕ್ಕೆ ಸೌಖ್ಯವೊ? ಸುಖವಾಗಿ ಸೊಳ್ಳೆ ಪರದೆಯನ್ನು ಕಟ್ಟಿಕೊಂಡು ನಿದ್ದೆ ಮಾಡುವುದು ಒಳ್ಳೇದೋ ಅಥವಾ ಸೊಳ್ಳೆಯಿಂದ ಕಡಿಸಿಕೊಳ್ಳುತ್ತಾ ಬಿದ್ದಿರುವುದು ಒಳ್ಳೆಯದೊ ನೀನೇ ಹೇಳು. ಸೊಳ್ಳೆ ಕಚ್ಚಿದರೆ ಮಲೇರಿಯಾ ಬರುತ್ತೆ. ಮಲೇರಿಯಾ ಬಂದರೆ ನಿನ್ನ ದೇಹಕ್ಕೂ ಕಷ್ಟ; ಸರ್ಕಾರಕ್ಕೂ ನಷ್ಟ. ಅಲ್ಲಪ್ಪಾ, ಸೊಳ್ಳೆ ಪರದೆ ಕಟ್ಟುವುದರಿಂದ ನಿಂದಾದ. ಏನು

ಗಂಟು ಹೋಗೋದು ಹೇಳು ನೋಡೋಣ. ನಾನೆ ಕಟ್ಟತೀನಿ ತೆಗಿ. ನಿಮ್ಮ ಸೇವಾ ಮಾಡೋದೂ ಸಹ ನನ್ನ ಹಣೇಲಿ ಬರೆದಿತ್ತು. (ರಾವ್ ಎದ್ದು ದಾಸ್‌ನ ತಲೆಯ ದೆಸೆಯಲ್ಲಿರುವ 'ಸೊಳ್ಳೆ ಪರದೆ'ಯನ್ನು ತೆಗೆದು-ಕೊಂಡು ಕಟ್ಟುವನು. ದಾಸ್ ಹಾಗೇ ಕಂಭದಂತೆ ಕುಳಿತಿರುವನು) ಎದ್ದಾರಿ ಏಳೋ. (ಸೊಳ್ಳೆ ಪರದೆಯಲ್ಲಿ ಒಂದು ರಂಧ್ರವು ಕಾಣ-ಬರುವುದು) ನೋಡು....ನೋಡು. ಇದನ್ನ ಹೊಲಿಯಪ್ಪ ಅಂತ ಎಷ್ಟು ಸಲ ಹೇಳಿದೆ! ಯಾಕೆ,ಒಳ್ಳೆ ಮಾತಿನಲ್ಲಿ ಹಾದೀಗೆ ಬರೋದಿಲ್ಲೇನು? ಒಳ್ಳೇದು. ಬೆಳಗ್ಗೆ ಎದ್ದ ಕ್ಷಣ 'ರಿಪೋರ್ಟ್' ಮಾಡೇಬಿಡತೀನಿ.

ದಾಸ್—ನನಗೆ ಹೊಲಿಯಲಿಕ್ಕೆ ಬರೋದಿಲ್ಲಾ. ನಾನೇನು ಮಾಡಬೇಕು ನೀನೇ ಹೇಳು.

ರಾವ್—ಎಲ್ಲಾ ಬರುತ್ತೆ. ಬೆಳಗ್ಗೆ ಎದ್ದು ದಾರ ಸೂಜಿ ತೆಗೆದುಕೊಂಡು ನನ್ನ ಹತ್ತಿರ ಬಾ. ನೋಡತೇನೆ ಅದು ಹೇಗೆ ಬರೋದಿಲ್ಲಾಂತ.

(ದಾಸ್ ಮಲಗಿಕೊಳ್ಳುವನು)

ಐಯ್ಯರ್—(ಎದ್ದು ಕುಳಿತುಕೊಳ್ಳುತ್ತಾ) What are your educational qualifications Mr. Rao ?

ರಾವ್—Shut up ! ಸರಿ ರಾತ್ರೀಲಿ ಎದ್ದು Educational qualifications ಕೇಳಲಿಕ್ಕೆ ಶುರು ಮಾಡಿದ. ಸುಮ್ಮನೆ ಬಿದ್ದುಕೊ. ಇದಕ್ಕೆಲ್ಲಾ ಬೆಳಗ್ಗೆ ಬೇಕಾದಷ್ಟುಹೊತ್ತಿದೆ........ರಾಮ ರಾಮ ! ಬೆಳಗ್ಗಿನಿಂದ ಸಂಜೆಯವರೆಗೂ ಮೈ ಮುರಿದು ದುಡಿದರೂ ಸ್ವಲ್ಪ ಹಾಯಾಗಿ ನಿದ್ದೆ ಮಾಡಲು ಸಹ ಆಸ್ಪದವಿಲ್ಲ. ಮನೆಯಲ್ಲಿ ತಿನ್ನಲಿಕ್ಕೆ ಗತಿಯಿಲ್ಲ; ಇಲ್ಲಿ ಕುಡಿಯಲಿಕ್ಕೆ ಬೇಕು ಮಗನಿಗೆ !

(ಗಣಪತಿ ಐಯ್ಯರ್ ಮಲಗಿಕೊಳ್ಳುವನು)

(ಹರಿಸಿಂಗ್ ಮಂಚದಿಂದ ಚಟಕ್ಕನೆ ಕೆಳಗೆ ಹಾರಿ ನಿಂತು 'ಏ-ಏ' ಎನ್ನುತ್ತಾ ಕೈ ಕೊಡವಲು ಶುರು ಮಾಡುವನು.)

ರಾವ್—ಏನಾಯಿತು ! ಏನಾಯಿತು ! ಚೇಳು ಕಡಿಯಿತೇನು ?

ಹರಿಸಿಂಗ್—ಇನ್ನು ನಾನು ಸಹಿಸುತ್ತಿರುವುದಿಲ್ಲ. ಇಕೋ ನನ್ನ ರಿಪೋರ್ಟ್. 'ನಸುಕಿನಲ್ಲೇ ನನಗೆ ಈ ಗುಡಾರದಿಂದ ಬದಲಿ ಬೇಕು.'

ರಾವ್—ಯಾಕೆ? ಏನಾಯಿತು?

ಹರಿಸಿಂಗ್—ಐಯ್ಯರ್ ನನ್ನ ಮುಂಡೀಗೆ ಕೈ ತಗುಲಿಸಿಬಿಟ್ಟ!

ರಾವ್—ಓಹೋ! ಇಷ್ಟೇನೆ! ನಾನು ಏನೋ ದೊಡ್ಡದ್ದೇ ಕೇಳುತ್ತೇನೋ ಅಂತ. ದೇವರೇ ಕಾಪಾಡಿದ. ಇಲ್ಲದಿದ್ದರೆ ನಾವೇ ಇಷ್ಟು ಸೆಣಸೊತ್ತಿನಲ್ಲಿ, ಈ ಘಳಿಗೆಯಲ್ಲಿ, ನಿನ್ನನ್ನು ಆಸ್ಪತ್ರೆಗೆ ನಾನು ಕಳಿಸಬೇಕಾಗಿ ಬರುತ್ತಿತ್ತು!

ಹರಿಸಿಂಗ್—ಇವೆಲ್ಲಾ ನನಗೆ ಸರಿಹೋಗುವುದಿಲ್ಲ. ನನಗೆ ಬೇರೆ ಜಾಗ ಕೊಡು, ಇಲ್ಲ ಈ ಗುಡಾರದಿಂದ ವರ್ಗಾಯಿಸು. ಈ ಮದ್ರಾಸಿಯ ಹಾವಳಿಯನ್ನು ನಾನು ಸಹಿಸೆನು.

ರಾವ್—ಸರಿಯಪ್ಪಾ ಸರಿ. ಬೆಳಗ್ಗೆ ಎದ್ದ ಕ್ಷಣ ನಿನ್ನನ್ನು ಬೇರೆ ಜಾಗದಲ್ಲಿ ಹಾಕುತ್ತೇನೆ.

ಹರಿಸಿಂಗ್—ಅದೆಲ್ಲಾ ಆಗುವುದಿಲ್ಲ. ಈಗಲೇ ನನಗೆ ಬೇರೆ ಜಾಗವನ್ನು ಕೊಡು. ಇಲ್ಲದಿದ್ದರೆ ನಾನು ರಾತ್ರಿಯೆಲ್ಲಾ ಜಾಗರಣೆ ಮಾಡುತ್ತೇನೆ

ರಾವ್—ನಿನ್ನದೇನು ಹಟ ಅಂತೀನಿ. ಆ ಮದ್ರಾಸಿ ನಿನ್ನ ಮುಂಡೀಗೆ ಕೈ ತಗಲಿಸಿ ಬಿಟ್ಟ ಮಾತ್ರಕ್ಕೆ ನಿಂದೇನಪ್ಪಾ ಗಂಟು ಹೋಗಿದ್ದು? ನಿನ್ನ ಜಾತಿ ಕೆಟ್ಟು ಹೋಯಿತೇನು? ಐಯ್ಯರ್ ಕೂಡ ನಿನ್ನ ಹಾಗೆ ಮನುಷ್ಯನಲ್ಲವೆ? ಹಾಗೆ ಕೇಳಿದರೆ ಅವನು ಬ್ರಾಹ್ಮಣನೂ ಹೌದು. ಅಲ್ಲಾ ಈ ಮಡಿ ಮೈಲಿಗೆ ಇವೆಲ್ಲಾ ನಿನಗೇ ಯಾಕೆ ಅಂತೀನಿ. (ಹರಿಸಿಂಗ್ ತನ್ನ 'ಲುಟಿಯಾ'ದಿಂದ ಮುಂಡಿಯನ್ನು ಚನ್ನಾಗಿ ತೊಳೆಯುವನು) ಮುಂಡಿ ತೊಳಕೊಂಡಿ ಹೋದತ್ತೊ? ನಿನ್ನ ಜಾತೀನೂ ಬ್ರಾಹ್ಮಣರ ಮಡಿಹೆಂಗಸಿನ ಚಾಳಿ ಇದ್ದಹಾಗೆ ಇದೆ. ನಿಮ್ಮಂಥವರೂ ಸಹ ಮಿಲಿಟರಿಗೆ ಏಕೆ ಸೇರುತ್ತಾರೋ ದೇವರೇ ಬಲ್ಲ. (ಹರಿಸಿಂಗ್ ಲುಟಿಯಾವನ್ನು ಕೆಳಗಿಟ್ಟು, ತನ್ನ ಮಂಚವನ್ನು ಸರಿಸಲು ಶುರು ಮಾಡುವನು) ಅರರೆ! ಯಾಕೆ ಬೆಳಗ್ಗೆ ಎದ್ದ ಕ್ಷಣ ಜಾಗ

ಬದಲಾಯಿಸಿಕೊಡತೀನಿ ಅಂತ ಹೇಳಿದ್ದು ಕೇಳಿಸಲಿಲ್ಲವೇನು? ಈ ಛಳಿಯಲ್ಲಿ ಎಲ್ಲಿ ಹೋಗತೀಯಾ ಸಾಯಲಿಕ್ಕೆ.

ಹರಿಸಿಂಗ್—ನಾನು ಹೊರಗೆ ಛಳಿಯಲ್ಲಿ ಕುಳಿತುಕೊಳ್ಳುತ್ತೀನೆ. ಸತ್ತರೂ ಪರವಾಯಿಲ್ಲ.

ರಾವ್—ಸಾಕಪ್ಪಾ ಸಾಕು! ಮಹಾರಾಯಾ, ನನ್ನ ಎದುರಿಗಿರುವ ಆ ಜಾಗೆಯಲ್ಲಿ ನಿನ್ನ ಮಂಚವನ್ನು ಹಾಕಿಕೊಂಡು, ರಾತ್ರಿಯನ್ನು ತಳ್ಳು. ಬೆಳಗ್ಗೆ ಎದ್ದಕ್ಷಣ 'ಅಜೀತ್ ಸಿಂಗ್'ನ ಜಾಗೆಯಲ್ಲಿ ನಿನ್ನನ್ನು ಬದಲಾಯಿಸುತ್ತೀನೆ.

ಅಜೀತ್‌ಸಿಂಗ್—(ಛಟಕ್ಕನೆ ಎದ್ದು) ನಾನು ಆ ಕೊಳಕು ಅಯ್ಯರ್ ಸಂಗಡ ಇರುವುದಿಲ್ಲ.

ರಾವ್—ನೀನು ಬಹಳ ಚೊಕ್ಕಟ! ನಿನ್ನ ಕೂದಲನಿಂದ ಹೊರಡುವ ದುರ್ವಾಸನೆಯಿಂದ ನಮ್ಮ ಮೂಗೇ ಕೊಳೆತು ಹೋಗಿದೆ!

ಅಜೀತ್‌ಸಿಂಗ್—ಏನಾದರೂ ಆಗಲಿ, ನಾನು ಅಯ್ಯರ್ ಸಂಗಡ ಇರುವದಿಲ್ಲ. ಅವನಿಗೆ ಯಾವ ಕೆಟ್ಟ ಚಟವಿಲ್ಲ? ಸಿಗರೇಟ್ ಕುಡಿಯುತ್ತಾನೆ. ಅದು ನನ್ನ ಮತದ ವಿರುದ್ಧ. ನಶ್ಯ ಹಾಕಿಕೊಳ್ಳುತ್ತಾನೆ. ಅದೂ ಸಹ ನನ್ನ ಮತದ ವಿರುದ್ಧ. ಅರೆ, ನಾವುಗಳು ಸಿಗರೇಟ್, ನಶ್ಯ ಮುಂತಾದುವುಗಳ ವಾಸನೆಯನ್ನೂ ತೆಗೆದುಕೊಳ್ಳಬಾರದೆಂದಮೇಲೆ ನಾನು ಅವನ ಸಂಗಡ ಇರುವುದಾದರೂ ಹೇಗೆ ನೀನೇ ಹೇಳು!

ರಾವ್—ಒಳ್ಳೇದಪ್ಪಾ ಒಳ್ಳೇದು. ನೀವೆಲ್ಲಾ ಒಂದಾಗಿ ಐಯ್ಯರ್ ಸಂಗಡ ಇರೋದಿಲ್ಲಾಂತ ಹೇಳಿದರೆ, ಪಾಪ ಅವನೆಲ್ಲಿ ಹೋಗಬೇಕು ಹೇಳು. ಅವನೂ ಸಹ ನಿಮ್ಮ ಹಾಗೆ ಒಬ್ಬ 'ಸಿಪಾಯಿ' ಅಲ್ಲವೆ? ಒಳ್ಳೇದು, ನಾನೇ ಅವನ ಹತ್ತಿರ ಇರತೀನಿ.

(ರಾವ್ ತನ್ನ ಮಂಚವನ್ನು ಹರಿಸಿಂಗ್ ಮಂಚದ ಜೊತೆಗೆ ಪರಸ್ಪರ ಸಹಾಯದಿಂದ ಬದಲಿ ಮಾಡುತ್ತಾನೆ. ಹರಿಸಿಂಗ್, ಅಜೀತಸಿಂಗ್ ಮಲಗುತ್ತಾರೆ.)

ರಹಿಮಾನ್—(ಎದ್ದು) ರಾವ್, ನನಗೆ ಆ ಜಾಗ ಬೇಕೂಂತ ಎಷ್ಟು ದಿನದಿಂದ ಹೇಳುತ್ತಿದ್ದೆ....ಆ....ನಾನು ಮುಸಲ್ಮಾನ. ಆ ಎದುರಿಗಿರುವ ಜಾಗೆಯಲ್ಲಿ 'ನಮಾಜ್' ಮಾಡಿಕೊಳ್ಳಬಹುದಾಗಿತ್ತು. ನೀನು ಹರಿಸಿಂಗ್‌ಗೆ ಆ ಜಾಗವನ್ನು ಕೊಟ್ಟುಬಿಟ್ಟೆಯಲ್ಲವೆ! ನೀವೆಲ್ಲಾ ಒಂದೇ ಕಾಣಿರೊ. ನಿಮ್ಮನ್ನು ಯಾವ ಮುಸಲ್ಮಾನನೂ ನಂಬಬಾರದು. ಬೆಳಗಾದ ಕ್ಷಣ 'ಮುಸಲ್ಮಾನರಿಗೆ ಬೇರೆ ಗುಡಾರಬೇಕು' ಅಂತ ರಿಪೋರ್ಟ್ ಮಾಡಿಬಿಡತೇನೆ. ಬೇರೆ ಗುಡಾರ ಸಿಗುವ ವರೆಗೂ ಹೊಡೆದಾಡದೇ ಇದ್ದರೆ ನಾನು ಮುಸಲ್ಮಾನನೇ ಅಲ್ಲ.

ರಾವ್—ನೋಡು ರಹಿಮಾನ್, ನೀನು ಮಾತು ಮಾತಿಗೂ ಜಾತಿ ಸಮಸ್ಯೆಯನ್ನು ಮುಂದೆ ತಂದು ಜಗಳ ಮಾಡಬೇಡ. ನಾನು ಯಾರ ಸಂಗಡಲೂ, ಯಾವಾಗಲೂ ಜಾತಿಭೇದ ಮಾಡಿಲ್ಲ. ಹರಿಸಿಂಗ್‌ನ ಬುದ್ಧಿ ನಿನಗೆ ಗೊತ್ತೇ ಇದೆ. ಪಾಪ, ಅತ ಯಾರ ಗೊಡವೆಗೂ ಹೋಗುವುದಿಲ್ಲ; ತನ್ನ ಪಾಡಿಗೆ ತಾನು ಇರುತ್ತಾನೆ. ಅವನಿಗೆ ಎಂಥ 'ಮಡಿವೈಲಿಗೆ ಪಿಶಾಚಿ' ಬಡಿದುಕೊಂಡಿದೆಯೋ ಏನೋ ದೇವರೇ ಬಲ್ಲ. ಎಲ್ಲರೂ ಒಗ್ಗಟ್ಟಾಗಿ ಹೊಂದಿಸಿಕೊಂಡು ಪರಸ್ಪರ ಪ್ರೇಮದಿಂದಿರುವುದು ಒಳ್ಳೇದೋ ಅಥವಾ ನಮ್ಮ ನಮ್ಮೊಳಗೇ ಗುದ್ದಾಡುವುದು ಒಳ್ಳೇದೋ ನೀನೇ ಯೋಚನೆ ಮಾಡು. ಅಲ್ಲ, ಆಜುಬಾಜಿನಲ್ಲಿರುವವರು ಏನಾರ ಅಂದಾರು ನೀನೇ ಹೇಳು!

ರಹಿಮಾನ್—ನನಗೆ ಅದೆಲ್ಲಾ ಗೊತ್ತಿಲ್ಲ. ಇದಾ, ತಗೊ ನನ್ನ ರಿಪೋರ್ಟ್. 'ಮುಸಲ್ಮಾನರಿಗೆ ಬೇರೆ ಗುಡಾರಬೇಕು, ಅದರಲ್ಲಿ ಹಿಂದೂಗಳಾಗಲೀ ಅಥವಾ ಇನ್ನಿತರ ಜಾತಿಯವರಾಗಲಿ ಇರಕೂಡದು.'

ರಾವ್—ಸರಿಯಪ್ಪಾ ಸರಿ! ಈಗಲಾದರೂ ಮಲಗಿಕೋ.

ಪಂಡಿತ್—(ಎದ್ದು ರಹಿಮಾನ್‌ನನ್ನು ಉದ್ದೇಶಿಸಿ) ಈಗಲೇ ಹೊರಡು....ಹುಂ....ಹೊರಡು ಆಚೆಗೆ.

ರಹಿಮಾನ್—ರಾವ್, ನನಗೆ ಹೊರಗೆ ಹೋಗು ಅಂತ ಹೇಳಲಿಕ್ಕೆ ಇವನಿಗೆ ಏನು ಅಧಿಕಾರವಿದೆ? ನಾನೂ ಇವನ ಹಾಗೇ ಸರ್ಕಾರದ ನೌಕರನಲ್ಲವೆ?

ರಾವ್—ಹಾಗಿದ್ದರೆ, ಏತಕ್ಕೋಸ್ಕರ 'ನೀನು ಮುಸಲ್ಮಾನರಿಗೆ ಪ್ರತ್ಯೇಕವಾದ ಗುಡಾರಬೇಕು' ಅಂತ ಕೇಳಿದ್ದು?

ರಹಿಮಾನ್—( ಕೋಪದಿಂದ ) ನಾನು ಹಿಂದೂಗಳ ಸಂಗಡ ಇರುವುದಿಲ್ಲ.

ಪಂಡಿತ್—(ಮತ್ತಿಷ್ಟು ಕೋಪದಿಂದ) ಹಾಗಾದರೆ ನಾನು ಮುಸಲ್ಮಾನರ ಸಂಗಡ ಇರುವುದಿಲ್ಲ.

ರಾವ್—ಸಾಕಪ್ಪಾ ಸಾಕು! (ಕೋಪದಿಂದ) ನೀವಿಬ್ಬರೂ ಬಾಯ್ಮುಚ್ಚಿ ಬಿಗಿ ಹಿಡಿಯುತ್ತೀರೋ ಇಲ್ಲವೋ. ಇಲ್ಲದಿದ್ದರೆ ಇಬ್ಬರನ್ನೂ ಕೈದುಮಾಡಿ, ಕ್ವಾರ್ಟರ್ ಗಾರ್ಡನಲ್ಲಿ ಹಬ್ಬಿ ಬರುತ್ತೇನೆ! (ಇಬ್ಬರೂ ಸುಮ್ಮನೆ ಬಿದ್ದುಕೊಳ್ಳುತ್ತಾರೆ) ಹಿಯೋ! ಯಾಕೋ ಬಹಳ ಜಾಸ್ತಿಯಾಗಿ ಹೋಯಿತು. ಮುಸಲ್ಮಾನರಿಗೆ ಬೇರೆ ಗುಡಾರ; ಹಿಂದೂಗಳಿಗೆ ಬೇರೆ ಗುಡಾರ! ಏನು ನಿಮ್ಮ ಮನಸ್ಸು ಬಂದ ಹಾಗೆ ಮಾಡಲಿಕ್ಕೆ ಇದು ನಿಮ್ಮ 'ಮಾವನ ಮನೆ' ಅಂತ ತಿಳಿದುಬಿಟ್ಟಿರಾ ಹೇಗೆ? ಇನ್ನೊಮ್ಮೆ ಯಾರು ಇಂಥ ರಿಪೋರ್ಟ್ ಮಾಡಿಗೀಡೀರಾ ಜೋಕೆ!

( ಸ್ವಲ್ಪ ಹೊತ್ತು ನಿಶ್ಶಬ್ದ )

(ಸೇನ್ ಎದ್ದು ಹೊರಗೆ ಹೋಗುತ್ತಾನೆ. ಮಲಗುವಾಗ 'ಇಂತಹ ಮಂಕು ಜನಗಳ ನಡುವಿನಿಂದ ನನ್ನಂಥ ಸುಧಾರಿಸಿದ ಜನಗಳೂ ಹಿಂದುಳಿಯಬೇಕಾಗಿ ಬಂದಿದೆಯಲ್ಲಾ' ಎಂದೆನ್ನುತ್ತಾ ಮಲಗಲು ಹೋಗುತ್ತಾನೆ.)

ಪಂಡಿತ್—(ಎದ್ದು ಕೋಪದಿಂದ) ಏ! ಯಾರಿಗೆ ಮಂಕು ಅಂತ ಹೇಳಿದ್ದು?

ಸೇನ್—(ಇನ್ನೂ ಕೋಪದಿಂದ) ನಿನಗೆ....ಅವನಿಗೆ........ಅವನಿಗೆ.

ಪಂಡಿತ್— ಜೋಕೆ. ಇನ್ನೊಮ್ಮೆ ಹೇಳಿಗೀಳೀಯಾ!

ರಾವ್—ಈಗ ನಿಮ್ಮಿಬ್ಬರಿಗೂ ಏನು ಬಂತಪ್ಪಾ ಧಾಡಿ? ಏ! ಏ! ಬೆಂಗಾಲಿ ಬಾಬು, ಸುಮ್ಮನೆ ಬಿದ್ಕೋತೀಯೋ ಇಲ್ಲೋ? ಬೆಳಗ್ಗೆ ಎದ್ದು

ಯಾರು ಮುಂದೆ ಯಾರು ಹಿಂದೆ ಎಂಬುದನ್ನು ಸ್ಪರ್ಧೆ ಮಾಡುವಿರಂತೆ.

ಸೇನ್—ಸ್ಪರ್ಧೆ ಮಾಡುವುದಾದರೂ ಯಾಕೆ ಬೇಕು? ಇದು ಎಲ್ಲರಿಗೂ ಗೊತ್ತಿರುವ ವಿಷಯ. ಎಲ್ಲಿ ನಿಮ್ಮಲ್ಲಿ 'ಟಾಗೂರ್' ರವರಂಥ ಕೀರ್ತಿಶಾಲಿ ವ್ಯಕ್ತಿಯನ್ನು ತೋರಿಸಿ ಕೊಡು.

ರಾವ್—ಸಾಕು ಸಾಕು. ಪಾತು ಮಾತಿಗೂ ಟಾಗೂರ್‌ರವರನ್ನು ಮುಂದೆ ತರಬೇಡ. ನೀವುಸ್ಸು ಕಣ್ಣು ತೆರೆದರಲ್ಲ.ಆಗ್ಲೆ ನಾವು ಸಾಮ್ರಾಜ್ಯವನ್ನು ಸ್ಥಾಪಿಸಿಬಿಟ್ಟೆವು!

(ಸೇನ್, ಪಂಡಿತ್ ಇಬ್ಬರೂ ಮಲಗಿಕೊಳ್ಳುತ್ತಾರೆ. ಒಂದು ಘಂಟೆ ಹೊಡೆದಿದ್ದು ಕೇಳಿಬರುತ್ತವೆ.)

ರಾವ್—ಅಪ್ಪಾ! ಈಗಾಗಲೇ ಒಂದು ಘಂಟೆ ಆಗಿಹೋಯಿತು. ಬೆಳಗ್ಗೆ ಐದೂವರೆ ಘಂಟೆಗೆ ಬೇರೆ ಏಳಬೇಕು. ಕಪೂರ್ ಇನ್ನೂ ಬಂದಿಲ್ಲ!.... ....ಎಲ್ಲಾದರೂ M.P. ಗಳ ಕೈಗೆ ಸಿಕ್ಕಿಬಿಟ್ಟನೋ ಏನೋ....ಮಹಾಶಯನ ಹೆಂಡತಿಮಕ್ಕಳು ಹೊಟ್ಟೆಗಿಲ್ಲದೆ ಸಾಯುತ್ತಿದ್ದಾರೆ. ಇಲ್ಲಿ ಈತನಿಗೆ 'ರಂಡೀಬಾಜಿ' ಬೇಕಾಗಿದೆ. ಅಯ್ಯೋ ದೇವರೆ! ......ಏ! ಇಲ್ಲಿ ನೋಡಿರಿ. ಇನ್ನು ಮೇಲೆ ಯಾರಾದರೂ ಗಲಾಟೆ ಮಾಡಿದರೆ ನಾನು ದಯಾಮಾಯ ಯಾವುದನ್ನೂ ನೋಡೊಲ್ಲ; ಕಪೂರ್ ಬರೋ ಹೊತ್ತಾಗಿದೆ. ಅವನಿಗೇ-ನಾದರೂ ನೀವೆಲ್ಲಾ ಇನ್ನೂ ಎದ್ದಿದ್ದೀರಿ ಅನ್ನೋದು ತಿಳಿಯಬಂದಿದ್ದೇ ಆದರೆ, 'ಆ ಹುಡಿಗಿ ಹೀಗೆ, ಈ ಹುಡಿಗಿ ಹಾಗೆ' ಅಂತ ತನ್ನ ರಾಮಾಯಣ ಮಹಾಭಾರತವನ್ನೆಲ್ಲಾ ಬಿಚ್ಚಲು ಮೊದಲು ಮಾಡುತ್ತಾನೆ. ನೀವೆಲ್ಲಾ ಸುಮ್ಮನೆ ಮಲಗಿಕೊಂಡಿದ್ದರೆ ಅವನೂ ಬಂದು ತೆಪ್ಪಗೆ ಬಿದ್ದುಕೊಳ್ಳುತ್ತಾನೆ.

(ಕಪೂರ್ ಒಳಗೆ ಪ್ರವೇಶಿಸುತ್ತಾನೆ. 'ರಾವ್, ರಾವ್' ಎಂದು ಕೂಗುತ್ತಾ, 'ರಾವ್'ನ ಮಂಚವೆಂದು ತಿಳಿದು, ಹರಿಸಿಂಗ್‌ನ ಮಂಚದ ಮೇಲೆ ಹೋಗಿ ಕುಳಿತು ಅವನನ್ನು ಎಬ್ಬಿಸಲು ಹರಿಸಿಂಗ್‌ನ ಮೇಲೆ ಕೈಯಿಡುತ್ತಾನೆ. ಹರಿಸಿಂಗ್ ಹಾರಿ ಎದ್ದು, 'ಛಿ....ಛಿ' ಎನ್ನುತ್ತಾ ನಿಂತುಕೊಳ್ಳುತ್ತಾನೆ.)

ಕಪೂರ್—ಅರರೆ! ನೀನು ಈ ಜಾಗದಲ್ಲಿ ಹೇಗೆ ಬಂದಿ? ರಾವ್ ಎಲ್ಲಿ?

ರಾವ್—ಸುಮ್ನೆ ಮಲಗಿಕೊ ಹರಿಸಿಂಗ್.

ಕಪೂರ್—ಯಾಕಪ್ಪಾ, ಏಕ್‌ದಮ್ ಈ ವರ್ಗಾವರ್ಗಿ ಯಾಕೆ?.... ....ರಾವ್........ಆ ಕ್ಯಾಬಿನೆಟ್‌ನಲ್ಲಿ ಹುಡುಗಿ ಇದ್ದಾಳಲ್ಲಾ........

ರಾವ್-.-(ನಡುವೆ ಬಾಯಿಹಾಕಿ) ಮುಚ್ಕೋಬಾಯಿ. ಮನೇಲಿ ತಿನ್ನಲಿಕ್ಕೆ ಕೂಳಿಲ್ಲ ಇಲ್ಲಿ ಆ ಹುಡಿಗಿ ಈ ಹುಡಿಗಿ ಅಂತ ಹಣ ಪೋಲುಮಾಡು ತ್ತಿದ್ದೀಯಾ! ಈಗ ಕೊಡಿಟ್ಟೆ ಒಂದು ರೂಪಾಯಿ ಯುದ್ಧ ಮುಗಿದ ಮೇಲೆ ಮೂರು ರೂಪಾಯಿಗಳ ಕೆಲಸ ಕೊಡುತ್ತೆ ಅನ್ನೋದು ಗೊತ್ತಿದೆಯೊ? ಈಗೇನು 'ಮಜಾ' ಅನ್ನಿಸಿರಬಹುದು ನಿನಗೆ. ಆದರೆ ಒಂದು ಸರ ಆ ರೋಗ ಹತ್ತಿತು ಅಂದರೆ, ನಿನ್ನ ಜೀವಮಾನದಲ್ಲೆಲ್ಲಾ ಅಳುತ್ತ ಅಳುತ್ತಾ ಸತ್ತು ಹೋಗುತ್ತೀಯಾ. ಪಾಪ, ನಿನ್ನ ಹೆಂಡತಿ 'ಹಣ ಕಳುಹಿಸು ; ಬಹಳ ಕಷ್ಟವಾಗಿದೆ '' ಅಂತ ಎಷ್ಟು ಕಾಗದ ಬರೀತಾಳೆ....ಸರಿ, ನಿನ್ನ ಮನೆ ಸಮಾಚಾರ ನನಗ್ಯಾಕೆ? ಈಗ ಎಷ್ಟು ಘಂಟೆಯಾಗಿದೆ ಎಂಬುದು ಮಹಾಶಯರಿಗೆ ಗೊತ್ತಿದೆಯೊ? ಒಂದು ಘಂಟೆ ಆಗಿದೆ ಒಂದು! ಹತ್ತೂವರೆ ಘಂಟೆಗಿಂತ ಮುಂಚೆ ಗುಡಾರದೊಳಗೆ ಹಾಜರಿರಬೇಕೆಂದು 'ಹುಕುಮ್' ಇದೆ. (ಹರಿಸಿಂಗ್ ತೆಪ್ಪಗೆ ಹೊರಗೆ ಹೋಗುತ್ತಾನೆ) ಸರಿ, ಈಗ ನೀನು ಸುಮ್ಮನೆ ಮಲಗಿಕೊ. ಇಲ್ಲದಿದ್ದರೆ ಕ್ಷೇಮವಿಲ್ಲ ಅಂತ ತಿಳಿದುಕೊ........ಅರರೆ! ಹರಿಸಿಂಗ್ ಎಲ್ಲಿ ಹೋದ?.... ಸ್ನಾನ ಮಾಡಲಿಕ್ಕೆ ಹೋಗಿದ್ದಾನು. ಈ ಛಳಿಯಲ್ಲಿ ತಣ್ಣೀರಿನಲ್ಲಿ ಸ್ನಾನಮಾಡಿ ಸತ್ತು ಹೋಗುತ್ತಾನೆ!........ಅಲ್ಲ, ನೀನಾರ ಯಾಕೆ ಅವನ ಮಂಚದ ಮೇಲೆ ಹೋಗಿ ಕುಳಿತುಕೊಳ್ಳಬೇಕಾಗಿತ್ತು ?

ಕಪೂರ್—ಅದೇ ನಾನೂ ಹೇಳತಿದ್ದದ್ದು. ಮಾತಾಡಲಿಕ್ಕೆ ಆಸ್ಪದ ಎಲ್ಲಿ ಕೊಡತೀಯಾ ನೀನು! ಆ ಕ್ಯಾಬಿನೆಟ್‌ಗೆ ಹೋಗಿದ್ದೆ. ಅಲ್ಲಿ M. P. ನನ್ನನ್ನು ಹಿಡಿದುಕೊಂಡುಬಿಟ್ಟರು....ಈಗತಾನೇ ಬಿಟ್ಟಿದ್ದಾರೆ. ನಾಳೆ ರಿಪೋರ್ಟ್ ಬಂತು ಅಂದರೆ ಬಹಳ ಕಷ್ಟವಾಗುತ್ತೆ.

ರಾವ್—ಒಳ್ಳೇದಾಯಿತು! ನಿನ್ನ 'Court Martial' ಆಗಿ, ಆರು ತಿಂಗಳು ಕಠಿಣಸಜದಿಂದ ನಿನ್ನ ಮಸ್ತಿಯೆಲ್ಲಾ ಇಳಿದುಹೋಯಿತು ಅಂದರೆ, ನೀನು ಒಳ್ಳೆ ಹಾದಿಗೆ ಬರುತ್ತೀಯಾ.

(ಇಷ್ಟರಲ್ಲಿ ಗಣಪತಿ ಐಯ್ಯರ್ ಎದ್ದು ಬೀಳುತ್ತಾ ಏಳುತ್ತಾ ಹೊರಗೆ ಹೋಗಲು ಪ್ರಯತ್ನ ಪಡುತ್ತಾನೆ.)

ರಾವ್—ಯಾಕಪ್ಪಾ, ನೀನ್ಯಾಕೆದ್ದಿ?

(ಐಯ್ಯರ್ ಬೆರಳು ತೋರಿಸುತ್ತಾನೆ)

ರಾವ್....ಜಲಬಾಧೆಗೆ? ಸರಿ. ಹುಷಾರಾಗಿ ಹೋಗು. ಮತ್ತೆಲ್ಲಾದರೂ ಕಂದಕದಲ್ಲಿ ಬಿದ್ದುಗಿದ್ದೀಯಾ.

(ಗಣಪತಿ ಅಯ್ಯರ್ ಹೊರಗೆ ಹೋಗುತ್ತಾನೆ. ಕೂಡಲೇ 'ದೊಪ್' ಎಂಬ ಶಬ್ದವೂ, ತಕ್ಷಣವೇ 'ಅಯ್ಯೋ' ಎಂಬ ಶಬ್ದವೂ ಕೇಳಿಬರುತ್ತದೆ.

ರಾವ್—ಆಹಾ! ಐಯ್ಯರ್ ಕಂದಕದಲ್ಲಿ ಬಿದ್ದುಬಿಟ್ಟ!

(ರಾವ್ ಹೊರಗೆ ಓಡಿಹೋಗುತ್ತಾನೆ. ಐಯ್ಯರನನ್ನು ಎತ್ತಿಕೊಂಡು ಗುಡಾರದಲ್ಲಿ ತರುತ್ತಾನೆ. ಗಣಪತಿ ಅಯ್ಯರ್ ಬಲಗೈಯನ್ನು, ಎಡಗೈಯಲ್ಲಿ ಹಿಡಿದು, ಜೋರಾಗಿ ಅಳುತ್ತಿರುತ್ತಾನೆ. ಎಲ್ಲರೂ ಎದ್ದು ಗಾಬರಿಯಿಂದ ಐಯ್ಯರ್ ಕಡೆ ನೋಡುತ್ತಿರುತ್ತಾರೆ.)

ರಾವ್—ಕೈಗೇನಾಯಿತು?

ಐಯ್ಯರ್—(ಅಳುತ್ತಾ) ಮುರಿದುಹೋಯಿತೂ....ೂ....

ರಾವ್—ಉಫ್! ಇನ್ನೆಲ್ಲಿ ನಿದ್ದೆ? ನಡಿಯಪ್ಪಾ ಕಪೂರ್, ಇವನನ್ನ ಆಸ್ಪತ್ರೆಯಲ್ಲಿ ಹಾಕಿಬರೋಣ.

(ಇಷ್ಟರಲ್ಲಿ ಹರಿಸಿಂಗ್ ಸ್ನಾನಮಾಡಿ, ಮೈಯಿಂದ ನೀರು ತೊಟ್ಟಿಕ್ಕುತ್ತಿರಲು ಗಡಗಡನೆ ನಡುಗುತ್ತಾ, ಗುಡಾರದ ಮಧ್ಯಭಾಗದಲ್ಲಿ ಬಂದು ನಿಂತು ಗಾಬರಿಯಿಂದ ಐಯ್ಯರ್ ಕಡೆಗೆ ನೋಡುತ್ತಿರುತ್ತಾನೆ. ಐಯ್ಯರ್ ಅಳುವುದನ್ನು ನಿಲ್ಲಿಸಿ, ಹರಿಸಿಂಗ್ ಕಡೆ ನೋಡುತ್ತಿರುತ್ತಾನೆ.)

— ಪರದೆ ಬೀಳುವುದು —

(ಮಾರ್ಚ, ೧೯೪೫, 'ಉಷಾ' ಬೆಂಗಳೂರು)

# ಕೆಲವು ಅನುಭವಗಳು

ಭಾರತದಲ್ಲಿ ವಾಸಿಸುತ್ತಿರುವ ಹಿಂದು ಮುಸಲ್ಮಾನರು ಬೇರೆ ಬೇರೆ ಜನಾಂಗಕ್ಕೆ ಸೇರಿದವರೆಂದೂ, ಹಿಂದುಗಳ ಸಂಸ್ಕೃತಿಗೂ, ಮುಸಲ್ಮಾನರ ಸಂಸ್ಕೃತಿಗೂ ಯಾವ ಸಂಬಂಧವಿರುವದಿಲ್ಲವೆಂದೂ, ಜ್ಞಾನಿ ಜಿನ್ನಾ ಸಾಹೇಬರು ವಾದಿಸುತ್ತಿದ್ದರು. ಈ ವಾದ ಎಷ್ಟು ಟೊಳ್ಳು, ಎಂಬುವನ್ನು ಕೆಳಗೆ ಉಲ್ಲೇಖಿಸಿದ ಅನುಭವಗಳಿಂದ ಸ್ಥಾಪಿಸಲು ಪ್ರಯತ್ನಿಸಲಾಗಿದೆ.

ಸುಮಾರು ಎಳೆಂಟು ವರ್ಷಗಳ ಹಿಂದೆ ಹೈದರಾಬಾದಿನಲ್ಲಿ ಹಿಂದು ಮುಸ್ಲಿಂ ದೊಂಬಿಯೊಂದು ನಡೆಯಿತು. ಆಗ ನಾನು ಸಿಕಂದರಾಬಾದಿನಲ್ಲಿ ಒಂದು ಇಂಗ್ಲೀಷ ಪತ್ರಿಕೆಯ ಸುದ್ದಿಗಾರನಾಗಿ ಕೆಲಸ ಮಾಡುತ್ತಿದ್ದೆ. ಹಿಂದೂ ಮುಸ್ಲಿಂ ದೊಂಬಿಯಲ್ಲಿ ಕೆಲಸ ಮಾಡುವ ಸುದ್ದಿಗಾರರು ತಮ್ಮ ಜೀವನವನ್ನು ಕೈಯಲ್ಲಿ ಹಿಡಿದಿರಬೇಕಾಗುತ್ತದೆ. ಕೆಲಸಕ್ಕೆ ಬೆಲೆ ಕೊಟ್ಟರೆ ಹೊಟ್ಟೆಗೆ ಹಿಟ್ಟಿಲ್ಲದೆ ಜೀವ ಬಿಡಬೇಕಾಗುತ್ತದೆ; ಹೊಟ್ಟೆಯನ್ನೇ ಪ್ರಾಧಾನ್ಯವಾಗಿಟ್ಟುಕೊಂಡರೆ ಜೀವನವನ್ನೇ ತೆರಬೇಕಾಗುತ್ತದೆ. ನನಗೆ ಇದರಿಂದ "ಅತ್ತ ಗರಿ ಇತ್ತ ಪುಲಿ'' ಎಂಬಂತಾಯಿತು. ಏನು ಮಾಡಬೇಕೆಂಬುದೇ ಹೊಳೆಯಲಿಲ್ಲ. ಕೊನೆಗೆ ದಾರಿ ತೋರಿಸೆಂದು ನಾನು ರಾಮ-ಅಲ್ಲಾ-ಏಸು ಗಳಿಗೆ ಮೊರೆಯಿಟ್ಟೆ. ಹುಟ್ಟಿಸಿದ ದೇವರು ಹುಲ್ಲು ತಿನ್ನಿಸುತ್ತಾನೆಯೇ! ಈ ಉಗ್ರ ದೊಂಬಿಯಲ್ಲಿ ಹೊಡೆತ ತಿಂದು ಸಾಯದಿರಬೇಕಾದರೆ ಒಂದೇ ಒಂದು ಉಪಾಯವಿದೆ ಎಂಬುದು ಹೊಳೆಯಿತು. ಅದೇನೆಂದರೆ, ನಾನು "ಹಿಂದುಗಳಿಗೆ ಹಿಂದುವಿನ ಹಾಗೆ ಕಾಣಬೇಕು: ಮುಸಲ್ಮಾನರಿಗೆ ಮುಸಲ್ಮಾನನಂತೆ ಕಾಣಬೇಕು." ಅಲ್ಲದೆ ಹಿಂದುಗಳಿಗೂ ಮುಸಲ್ಮಾನರಿಗೂ ದೇಹದ ಹೊರಗಡೆ ಕಾಣುವ ಬಟ್ಟೆ ಬರೆಗಳನ್ನು ಬಿಟ್ಟರೆ ವ್ಯತ್ಯಾಸವಾದರೂ ಏನಿದೆ? ಎಲ್ಲರಿಗೂ ಕಣ್ಣು, ಕಿವಿ, ಮೂಗು, ಕೈಕಾಲುಗಳು ಸರಿಸಮಾನವಾಗಿವೆ. ವ್ಯತ್ಯಾಸ

ಕಾಣಬರುವುದು ದೇಹದ ಹೊರಗಡೆ ಇರುವ ದಾಡಿ ಜುಟ್ಟುಗಳಿಂದಲ್ಲವೆ? ಅದೇ ಈಗ ಎಷ್ಟೊ ಮುಸಲ್ಮಾನರಿಗೆ ದಾಡಿಯಿಲ್ಲ; ಹಿಂದುಗಳಿಗೆ ಜುಟ್ಟಿಲ್ಲ. ಸರಿ, ಏನು ಮಾಡಬೇಕೆಂಬುದನ್ನು ಮನಸ್ಸಿನಲ್ಲಿ ಯೋಚಿಸಿಕೊಂಡು ಅಂಗಡಿಗೆ ಹೋಗಿ ಒಂದು ಗಾಂಧಿಟೋಪಿಯನ್ನೂ ಒಂದು ಜಿನ್ನಾಟೋಪಿ ಯನ್ನೂ ಕೊಂಡು ತಂದೆ. ಟ್ರಂಕಿನ ಮೂಲೆಯಲ್ಲಿ ಬಿದ್ದಿದ್ದ ಶೇರವಾನಿ ಯನ್ನೂ ಪಾಯಿಜಾಮೆಯನ್ನೂ ಹೊರ ತೆಗೆದು ತೊಟ್ಟುಕೊಂಡೆ. ಅನಂತರ ನಿಲುವುಗನ್ನಡಿಯ ಮುಂದೆ ನಿಂತು ಗಾಂಧಿಟೋಪಿಯನ್ನು ತಲೆಗೆ ಧರಿಸಿ ನನ್ನನ್ನೇ ನೋಡಿಕೊಂಡರೆ ಹದಿನಾರಾಣೆ ಹಿಂದುವಾಗಿ ಕಂಡೆ. ತದನಂತರ ಗಾಂಧಿ ಟೋಪಿಯನ್ನು ತೆಗೆದು ಜಿನ್ನಾಟೋಪಿ ಏರಿಸಿ ನೋಡಿದರೆ, ಪಕ್ಕಾ ಮುಸಲ್ಮಾನ! ವಹವ್ವಾ!! ಎಂಥ ಉಪಾಯ!!! ಬರೀ ಟೋಪಿ ಬದಲಾವಣೆಯಿಂದ ಹಿಂದೂ ಜನಾಂಗದಿಂದ ಮುಸಲ್ಮಾನ್ ಜನಾಂಗಕ್ಕೂ, ಮತ್ತೆ ತಿರುಗಿ ಮುಸಲ್ಮಾನ ಜನಾಂಗದಿಂದ ಹಿಂದೂ ಜನಾಂಗಕ್ಕೂ ಪರಿ ವರ್ತಿಸಿಬಿಡುತ್ತಿದ್ದೆ!! ಅಬ್ಬಾ, ಜನಾಂಗವನ್ನು ಬದಲಿಸಿ ಬಿಡುವುದು ಎಷ್ಟು ಸುಲಭ! ಆದರೆ ಒಂದು ಸಂಶಯ. ನೀಗ್ರೋವಾಗಲಿ, ಯೂರೋಪಿಯನ್ ಆಗಲಿ, ಮತ್ತು ಚೈನಾ ದೇಶೀಯನಾಗಲಿ, ಈ ತರಹದ ಟೋಪಿ ಬದ-ಲಾವಣೆಯಿಂದ, ಹಿಂದೂ ಅಥವಾ ಮುಸಲ್ಮಾನರಂತೆ ಕಂಡು ಬರುವನೆ?? ಅದನ್ನು ಜ್ಞಾನಿ ಜಿನ್ನಾ ಸಾಹೇಬರು ಪರಿಹರಿಸದೆ ಹೋದರು.

ಶೇರ್‌ವಾನಿಯ ಎರಡೂ ಕಿಸೆಗಳಲ್ಲಿ ಈ ಎರಡೂ ಟೋಪಿಗಳನ್ನು ಇಟ್ಟುಕೊಂಡು, ಪರಿಸ್ಥಿತಿಗೆ ತಕ್ಕಂತೆ ಟೋಪಿಯನ್ನು ಬದಲಾಯಿಸುತ್ತಾ ಮಸೀದೆಗಳು, ಗುಡಿಗಳು, ಹಿಂದು ಮುಸಲ್ಮಾನರ ಸಭೆಗಳು ಎಲ್ಲ ಕಡೆ-ಗಲ್ಲೂ ತಿರುಗಿ ತಿರುಗಿ ವಿಷಯಗಳನ್ನು ಸಂಗ್ರಹಿಸುತ್ತಿದ್ದೆ. ಯಾವ ಮುಸ-ಲ್ಮಾನನಾಗಲಿ ನಾನು ಹಿಂದು ಎಂದು ಸಂಶಯ ಪಡಲಿಲ್ಲ.

* * *

ಮಹಾತ್ಮ ಹಿಟ್ಲರ್‌ನ ಕೃಪಾಕಟಾಕ್ಷದಿಂದಾಗಿ, ನಾನು ಇರಾಕ್, ಇರಾನ್, ಸಿರಿಯ, ಪ್ಯಾಲೆಸ್ಟೈನ್ ರಶಿಯನ್ ಬಾರ್ಡರ್, ಈಜಿಪ್ಟ್ ಲಿಬಿಯ, ಸೈಪ್ರಸ್ ಮತ್ತು ಸೌತಾಫ್ರಿಕ ಮುಂತಾದ ದೇಶಗಳಲ್ಲೆಲ್ಲಾ ತಿರುಗಾ-

ಡಬೇಕಾಗಿ ಬಂದಿತು. ಈ ಸಮಯದಲ್ಲಿ ನನಗೊಬ್ಬ ಆಪ್ತಮಿತ್ರನಿದ್ದ. ಆತನ ಹೆಸರುರಹಿಮಾನ್. ರಹಿಮಾನ್ ಮತ್ತು ನಾನು ಈ ಎಲ್ಲ ದೇಶಗಳಲ್ಲೂ ಒಟ್ಟಿಗೆ ತಿರುಗಿದೆವು. ಈ ಎಲ್ಲ ದೇಶಗಳ ಜನರೂ, ಜನಾಬ್ ಜಿನ್ನಾರವರ ವಾದದಂತೆ, ನನ್ನನ್ನು ಹಿಂದೂ ಎಂದೂ, ರಹಿಮಾನ್‌ನನ್ನು ಮುಸಲ್ಮಾನ ನೆಂದೂ ಸಂಬೋಧಿಸ ಬೇಡವೇ! ಅಲ್ಲಾ ಒಬ್ಬ ನೀಗ್ರೋ ಸಿಪಾಯಿ ಮದ-ರಾಸಿನಲ್ಲಿ ತಿರುಗುತ್ತಿದ್ದರೆ ಅವನನ್ನು ನಾವು "ನೀಗ್ರೋ'' ಎಂದು ಗುರುತಿಸು-ವುದಿಲ್ಲವೆ? ಆದರೆ ಈ ಜನಗಳು ಜಿನ್ನಾರವರ ಇಚ್ಛೆಯಂತೆ ನಮ್ಮನ್ನು ಬೇರೆ ಬೇರೆಯಾಗಿ ಕಾಣದೆ, ಒಂದೇ ಹೆಸರಿನಲ್ಲಿ ಸಂಬೋಧಿಸಬೇಕೇ! ''ಏ! ಹಿಂದೂಸ್ಥಾನಿಗಳೇ ಇಲ್ಲಿ ಬನ್ನಿ'' ''ನಮ್ಮ ಹಿಂದೂಸ್ಥಾನಿ ಮಿತ್ರರು ಬಂದರು'' ಎಂದೇ ನಮ್ಮಿಬ್ಬರನ್ನು ಗುರುತಿಸಿದರು ಅವರು. ಜಿನ್ನಾರವರ ವಾದದ ಪ್ರಕಾರ, ನಾವಿಬ್ಬರೂ ಬೇರೆ ಬೇರೆ ಜನಾಂಗಕ್ಕೆ ಸೇರಿದವರೂ ಬೇರೆ ಬೇರೆ ಸಂಸ್ಕೃತಿಯುಳ್ಳವರೂ ಆಗಿದ್ದರೂ ಇಷ್ಟು ದೇಶಗಳ ಜನರು ನಮ್ಮಿಬ್ಬರ ನಡುವೆ ಯಾವಭೇದವನ್ನೂ ಕಂಡುಹಿಡಿಯಲಿಲ್ಲ. ಅಂದ ಮೇಲೆ, ನಿರ್ಮಲವಾದ ಹೃದಯದಿಂದಲೂ, ಮತ್ತು ನಿಷ್ಪಕ್ಷವಾದ ದೃಷ್ಟಿಯಿಂದಲೂ ನೋಡಿದಾಗ. ನಮ್ಮಿಬ್ಬರ ನಡುವೆ ಯಾವ ಭೇದವೂ ಕಾಣಬರದೇ ಇದ್ದ ಮೇಲೆ, ನನ್ನ ಮತ್ತು ರಹಿಮಾನನ ನಡುವೆ ಯಾವುದೋಒಂದು ಬಾಂಧವ್ಯ-ವಿರಬೇಕಲ್ಲವೆ?

* * * *

ಮೂರನೆಯದಾಗಿ ನಾನು ಮತ್ತು ರಹಿಮಾನ್ ಇಬ್ಬರೂ ದಕ್ಷಿಣಆಫ್ರಿ-ಕದಲ್ಲಿ ಕಾಲಿಟ್ಟಾಗ ನಮಗೆ ಅಲ್ಲಿಯ ಬಿಳಿಯರು ಕೊಟ್ಟ ಸುಸ್ವಾಗತದಲ್ಲಿ ಯಾವ ಭೇದವನ್ನು ಮಾಡಲಿಲ್ಲ. ಮುಸಲ್ಮಾನ ಜನಾಂಗಕ್ಕೆ ಸೇರಿದ ರಹಿ-ಮಾನನನ್ನೂ ನಹ ಹಿಂದೂ ಜನಾಂಗಕ್ಕೆ ಸೇರಿದ ನನ್ನಂತೆ, ಕರಿಯ ಜನಾಂಗ ವೆಂದು ಹೀನ ರೀತಿಯಲ್ಲಿ ನಡೆಸಿಕೊಳ್ಳಬೇಕೆ? ಪಾಪ! ಮುಸಲ್ಮಾನ ರಹಿ-ಮಾನನನ್ನೂ, ಹಿಂದುವಾದ ನನ್ನನ್ನೂ, ಒಂದೇ ಒಂದು ಜನಾಂಗಕ್ಕೆ ಸೇರಿ ದವರೆಂದು ತುಚ್ಛೀಕರಿಸಬೇಕೆ? ನಾವಿಬ್ಬರೂ ''ಹಿಂದೂ ಅಲ್ಲ, ಮುಸಲ್ಮಾನ್ ಅಲ್ಲ, ಕರಿಯ ಜನಾಂಗನಂತೆ!'' ಅಂದರೆ ನಮ್ಮಿಬ್ಬರ ನಡುವೆ ಒಂದು ವಿಧ ವಾದ ಸಂಬಂಧವಿದೆಯೆಂದಾಯಿತಲ್ಲವೆ?

೦ ೦ ೦ ೦

ಒಂದು ಸಲ ಯುದ್ಧರಂಗದಲ್ಲಿ, ನಾನು ಮತ್ತು ರಹಿಮಾನ್ ಒಟ್ಟಿಗೆ ಜರ್ಮನರ ಕೈದಿಗಳಾಗುವ ಸಂಯೋಗ ಬಂದೊದಗಿತು. ಜರ್ಮನರಿಗೂ ಸಹ ಜನಾಬ್ ಜಿನ್ನಾರವರ ವಾದ ಅರ್ಥವಾಗಿಲ್ಲವೆಂದು ತೋರುತ್ತೆ. ಒಬ್ಬ ಜರ್ಮನ್ ಸಿಪಾಯಿ ನನ್ನ ಹತ್ತಿರ ಬಂದು, ನಮ್ಮಿಬ್ಬರನ್ನೂ ಒಟ್ಟಿಗೆ ಸೇರಿಸಿ ''ಥೂ! ಹಿಂದುಸ್ಥಾನಿ ಗುಲಾಮ'' ಎಂದು ಒದೆಯಬೇಕೆ? ಅಲ್ಲಾ, ''ಥೂ! ಹಿಂದೂ ಗುಲಾಮ'' ಎಂದು ನನ್ನನ್ನೂ, 'ಥೂ, ಮುಸ್ಲಿಂ ಗುಲಾಮ' ಎಂದು ರಹಿಮಾನನನ್ನೂ ಒದೆಯಬಾರದಾಗಿತ್ತೆ? ಅಂದರೆ ಜಿನ್ನಾರವರ ವಾದವು ನಿಜವಾಗಿ ಅವರಿಗೆ ತೃಪ್ತಿಯಾದರೂ ಆಗುತ್ತಿರಲಿಲ್ಲವೆ?

○ ○ ○ ○

ಕೊನೆಯದಾಗಿ ನನ್ನ ಸ್ನೇಹಿತನೊಬ್ಬನಿಗೆ, ಮುಸಲ್ಮಾನ್ ಜಾತಿಗೆ ಪರಿವರ್ತಿಸಿಕೊಂಡರೆ, ಅವನಲ್ಲಿ ಜಿನ್ನಾರವರು ಹೇಳುವಂಥ ಯಾವುದಾದರೂ ಬದಲಾವಣೆಯುಂಟಾಗುವುದೋ ಏನೋ ಎಂಬ ಕುತೂಹಲವುಂಟಾಯಿತು. ಇದನ್ನು ಪರೀಕ್ಷೆ ಮಾಡಲೋಸುಗ, ಆತನು ಗುಟ್ಟಿನಲ್ಲಿ (ಮನೆಯವರಿಗೆ ತಿಳಿಯಬಾರದೆಂದು) ಇರಾಕಿನಲ್ಲಿ ಒಂದು ಮಸೀದಿಗೆ ಹೋಗಿ ಒಬ್ಬ ಇರಾಕಿ ಮಿತ್ರನ ಸಹಾಯದಿಂದಲೂ, ಮತ್ತು ಹಣದ ಬಲದಿಂದಲೂ ಒಬ್ಬ ಮೌಲವಿಸಾಹೇಬರನ್ನು ಬಳಿಯಲ್ಲಿ ಬೀಳಿಸಿಕೊಂಡು, ಶಾಸ್ತ್ರೋಕ್ತವಾಗಿ ಮುಸಲ್ಮಾನ್ ಧರ್ಮವನ್ನು ಸ್ವೀಕರಿಸಿದನು.

ತದನಂತರ ಮಸೀದಿಯ ಹೊರಗೆ ಬಂದು ತನ್ನ ದೇಹವನ್ನು ಚೆನ್ನಾಗಿ ಪರೀಕ್ಷಿಸಿದರೂ, ಏನೂ ಭೇದ ಕಾಣಬರಲಿಲ್ಲ. ಅದೇ ಎರಡು ಕಾಲು ಎರಡು ಕೈ,ಎರಡು-ಅಲ್ಲ-ಒಂದು ಮೂಗು....ಇತ್ಯಾದಿ ಕಾಣಬಂದವು. ಆತನಿಗೆ ನಂಬಲಾಗಲಿಲ್ಲ. ಅಲ್ಲ, ಕಾಯಿದೆ ಆಜಿಮ್ ಜಿನ್ನಾರವರು, ಹಿಂದೂಗಳೂ ಮುಸ್ಲಿಮರೂ, ಬೇರೆ ಬೇರೆ ಜನಾಂಗಕ್ಕೆ ಸೇರಿದವರೂ ಬೇರೆ ಬೇರೆ ಸಂಸ್ಕೃತಿಯುಳ್ಳವರೂ ಮತ್ತು ಅವರಿಬ್ಬರ ನಡುವೆ ಯಾವ ತರಹದ ಸಂಬಂಧವಿರುವದಿಲ್ಲವೆಂದೂ ಅಪ್ಪಣೆ ಕೊಡಿಸಿರುವುದು ಸುಳ್ಳೆ? ಇದೇ ಈಗ ಮುಸಲ್ಮಾನನಾದ ಅವನಲ್ಲಿ ಕೊಂಚವೂ ಬದಲಾವಣೆ ಕಂಡುಬರಲಿಲ್ಲವೇಕೆ! ಬಹಳ

ಯೋಚನೆ ಮಾಡಿದರೂ ಅವನ ಕುತೂಹಲ ದೂರವಾಗಲಿಲ್ಲ. ಕೊನೆಗೆ ತನ್ನ ಕಣ್ಣುಗಳಲ್ಲೇ ಏನೋ ಬದಲಾವಣೆಯುಂಟಾಗಿರಬೇಕೆಂದು ಆತನಿಗೆ ಸಂಶಯವಾಯಿತು.

ಈ ಸಂಶಯವನ್ನು ಬಗೆಹರಿಸಿಕೊಳ್ಳಲು, ಆತನು ನನ್ನ ಹತ್ತಿರ ಬಂದು ತನ್ನ ವಿಷಯವನ್ನು ಹೇಳಿ, ತನ್ನಲ್ಲಿ ಏನಾದರೂ ಬದಲಾವಣೆಯಾಗಿರುವುದೋ ಎಂಬುದನ್ನು ಪರೀಕ್ಷಿಸಲು ನನ್ನನ್ನು ಪ್ರಾರ್ಥಿಸಿದ.

ನಾನು ಆತನನ್ನು ತಲೆಯಿಂದ ಕಾಲಿನವರೆಗೂ ಚೆನ್ನಾಗಿ ಪರೀಕ್ಷಿಸಿದೆ. ಆತನಲ್ಲಿ ಏನಾದರೂ ಬದಲಾವಣೆಯಾಗಿರುವುದು ಕಂಡು ಬರಲಿಲ್ಲ. ಕಾರಣವೇನು?

(ಮಾರ್ಚಿ, ೧೯೪೩, "ಸ್ವತಂತ್ರ" ಬೆಂಗಳೂರು)



# ಸ್ನೇಹಪ್ರಭೆಯ ಪ್ರೇಮವಿವಾಹ

‘ ನೀನು ತಪ್ಪು ಮಾಡುತ್ತಿದ್ದೀಯೆ ಸ್ನೇಹಪ್ರಭಾ. ರ್‍ಯಾಲೆಯನ್ನು ಮದುವೆಯಾಗಿ ನೀನು ಸುಖ ಪಡಲಾರೆ. ಆತ ಆಂಗ್ಲೇಯನು, ನೀನು ಹಿಂದೂದೇಶದವಳು. ನೀವಿಬ್ಬರೂ ಬೇರೆ ಬೇರೆ ವಾತಾವರಣದಲ್ಲಿ ಹುಟ್ಟಿ ಬೆಳೆದಿದ್ದೀರಿ. ನೀವಿಬ್ಬರೂ ಎಂದೂ ಹೊಂದಿಕೊಂಡಿರಲಾರಿರಿ. ಜೋಕೆ. ಮುಂದೆ ಪಶ್ಚಾತ್ತಾಪ ಪಡಬೇಕಾದೀತು. ’ ದರ್ಶನಸಿಂಗ್ ಸ್ನೇಹಪ್ರಭೆಗೆ ಸ್ವಲ್ಪ ಕಟುವಾಗಿಯೇ ತಿಳುಹಿಸಿದ.

ಸ್ನೇಹಪ್ರಭಾ ತಾನು ರ್‍ಯಾಲೆಯನ್ನು ಪ್ರೀತಿಸುತ್ತಿರುವೆನೆಂದೂ, ರ್‍ಯಾಲೆಯೂ ಸಹ ಮನಃಪೂರ್ವಕವಾಗಿ ತನ್ನನ್ನು ಪ್ರೀತಿಸುತ್ತಿರುವನೆಂದೂ ನಂಬಿದ್ದಳು.

ರ್‍ಯಾಲೆಗೆ ಸ್ನೇಹಪ್ರಭಳ ಆವಶ್ಯಕತೆಯೇನೋ ಇತ್ತು. ಏಕೆಂದರೆ ಅವನು ತನ್ನ ಮನೆ ಮಠಗಳನ್ನು ಬಿಟ್ಟು ಇಷ್ಟು ದೂರದೇಶಕ್ಕೆ ಬಂದಿರುವಾಗ ಇಲ್ಲಿ ತನ್ನ ದೇಶದ ಹೆಂಡತಿ ಎಲ್ಲಿಂದ ಸಿಗಬೇಕು? ಚೆನ್ನಾಗಿ ತಿಂದುಂಡು, ಸಾಕಷ್ಟು ಹಣವನ್ನು ಸಹ ಶೇಖರಿಸಿರುವ ಅವನಿಗೆ ಎಲ್ಲಿಯವರೆಗೆ ಕಾಮಪೀಡೆಯನ್ನು ತಡೆಯಲಿಕ್ಕಾದೀತು?ಸ್ನೇಹಪ್ರಭಳನ್ನುಮದುವೆಯೆಂಬ ಬಲೆಯಲ್ಲಿ ಬೀಳಿಸಿಕೊಂಡು ಆವಶ್ಯಕತೆಯಿರುವವರೆಗೂ ಉಪಯೋಗಿಸಿ ನಂತರ ಬೇಡವಾದಾಗ ಬಿಸಾಡಿ ಬಿಟ್ಟರಾಯಿತು ” ಎಂದು ಹಂಚಿಕೆ ಹಾಕಿದ್ದ ರ್‍ಯಾಲೆ. ಚಾಣಾಕ್ಷನಾದ ಅವನು, ತನ್ನ ನಡವಳಿಕೆಯಲ್ಲಿ ಸ್ನೇಹಪ್ರಭಳಿಗೆ ಸ್ವಲ್ಪವೂ ಸಂದೇಹ ಬಾರದಂತೆ ಎಚ್ಚರಿಕೆಯಿಂದ ವರ್ತಿಸುತ್ತ, ಮುಗ್ಧೆ ಸ್ನೇಹಪ್ರಭೆಯನ್ನು ತನ್ನ ಬಲೆಯಲ್ಲಿ ಬೀಳಿಸಿಕೊಂಡಿದ್ದ.

ಸ್ನೇಹಪ್ರಭೆಯನ್ನು ಮದುವೆಯಾದಲ್ಲಿ ರ್‍ಯಾಲೆಗೆ ಸ್ವಲ್ಪ ಖರ್ಚು ತಗಲುತ್ತಿತ್ತು ಎಂಬುದೇನೊ ನಿಜ. ಆದರೆ ಅವನಿಗೆ ಹಿಂದೂಸ್ಥಾನದ ಕೃಪೆಯಿಂದ ಹಣದ ಅಡಚಣೆ ಇರಲಿಲ್ಲ. ಹಣಕ್ಕಾಗಿ ಪೇಚಾಡಲು ಇದು ಇಂಗ್ಲೆಂಡೇ? ಇಂಗ್ಲೆಂಡಿನಲ್ಲಾದರೋ ಆತನು ಸಾಧಾರಣ ಕೂಲಿಯಾಗಿದ್ದ. ಆದರೆ ಈ ದೇಶದಲ್ಲಿ ಅವನೇನು ಕೂಲಿಯೆ? ಎಂಥ ಕನಿಷ್ಟ ದರ್ಜೆಯ ಬಿಳಿಯನೂ ಸೂಯೆಜ್ ಕಾಲುವೆಯ ಪೂರ್ವಕ್ಕೆ ಕಾಲಿಟ್ಟ ತಕ್ಷಣ ದೊಡ್ಡ ಸಾಹೇಬನಾಗಿ ಬಿಡುವುದಿಲ್ಲವೋ? ಅಂತೆಯೇ ಆತನು ಈ ದೇಶಕ್ಕೆ ಬಂದಮೇಲೆ ಸಾಕಷ್ಟು ಹಣವು ತಾನೇ ತಾನಾಗಿ ಅವನ ಹತ್ತಿರಕ್ಕೆ ಬರುತ್ತಿಲ್ಲವೋ! ಅಂದಮೇಲೆ ಈ ಮದುವೆಯೆಂಬ ನೆವದಿಂದ ಸ್ವಲ್ಪ ಖರ್ಚಿನ ಮುಖ ನೋಡಿದಲ್ಲಿ ಆತನು ಸುಖಿಸುವುದೆಂತು? ಅದೂ ಅಲ್ಲದೆ ಬೇರೆ ರೀತಿಯಲ್ಲಿ ತನ್ನ ಕಾಮಪೀಡೆಯನ್ನು ನಿವಾರಿಸಿಕೊಳ್ಳಲು ಪ್ರಯತ್ನ ಪಟ್ಟಲ್ಲಿ ಸೂಳೆರೋಗ ಹತ್ತಿದರೆ ಏನುಗತಿ?

ಸ್ನೇಹಪ್ರಭಾ ಆಗತಾನೆ ಸ್ಕೂಲನ್ನು ಬಿಟ್ಟು ಸೈನ್ಯಕ್ಕೆ ಸೇರಿದ್ದಳು. ಈಗ್ಯೆ ಸುಮಾರು ಮೂರು ತಿಂಗಳಿಂದಲೂ ರ್‍ಯಾಲೆಯ ಸಂಗಡ ಕೆಲಸ ಮಾಡುತ್ತಿದ್ದಾಳೆ. ಸ್ನೇಹಪ್ರಭಾ ಮತ್ತು ರ್‍ಯಾಲಿ ಇವರ ಸಂಬಂಧದಲ್ಲಿ ಬಹಳ ದಿನಗಳಿಂದಲೂ ಸಂಶಯ ಪಡುತ್ತಿದ್ದ ದರ್ಶನಸಿಂಗ್. ಪಾಪ! ಪೆದ್ದು ಹುಡುಗಿ ಹಾಳಾಗಿ ಹೋಗುತ್ತಾಳೆ ಎಂಬ ಯೋಚನೆ ಅವನನ್ನು ಬಹಳ ದಿನಗಳಿಂದಲೂ ಪೀಡಿಸುತ್ತಿತ್ತು. ಆದರೆ ಆತನು ಸ್ನೇಹಪ್ರಭೆಯ ಮುಂದೆ ಈ ವಿಷಯವನ್ನು ಬಾಯಿಬಿಟ್ಟು ಹೇಳಲಿಕ್ಕಾದೀತೆ?

ರ್‍ಯಾಲೆ ಮತ್ತು ಸ್ನೇಹಪ್ರಭಾ ಇವರ ಲಗ್ನಪತ್ರಿಕೆ ಅವನನ್ನು ಬಹಳ ಆಶ್ಚರ್ಯಗೊಳಿಸಿತು. ವಿಷಯ ಇಷ್ಟು ದೂರದ ವರೆಗೂ ಹೋಗಿದೆ ಎಂದು ಆತನು ಕನಸಿನಲ್ಲಿಯೂ ಎಣಿಸಿರಲಿಲ್ಲ.

ಹಿಂದೂಸ್ಥಾನಿಯಾದ ಆತನಿಗೆ ಪರದೇಶೀಯರಿಂದ ತನ್ನ ದೇಶದ ಭಗಿನಿಯರು ಕೆಟ್ಟು ಹೋಗುತ್ತಿರುವದನ್ನು ನೋಡುತ್ತಿದ್ದರೂ ಸಹ ಸುಮ್ಮನೆ ಕೈಕಟ್ಟಿಕುಳಿತುಕೊಳ್ಳುವುದು ಸಾಧ್ಯವಿರಲಿಲ್ಲ. ಆದರೆ ಆತನೇನು ಮಾಡಲು

ಶಕ್ಯವಿದೆ? ಕುರಿಯು ತನ್ನ ಕತ್ತನ್ನು ಕುಯ್ಯಿಸಿಕೊಳ್ಳಲು ತಾನೇ ಒಪ್ಪಿ ಮುಂದೆ ಬಂದು ಜೀವ ತೆತ್ತರೆ, ಸ್ವತಃ ಬ್ರಹ್ಮನೇ ಆಗಲಿ ಏನು ಮಾಡಲು ಸಾಧ್ಯ?

ಆದರೂ ಸಹ ಸ್ನೇಹಪ್ರಭೆಗೆ ಒಂದು ಬಾರಿ ಬುದ್ಧಿ ಹೇಳಿ ನೋಡಬೇಕೆಂಬ ವಿಚಾರ ಅವನನ್ನು ಕಾಡಹತ್ತಿತು. "ಅವಳು ಹಾದಿಗೆ ಬಂದರೆ ಬರಲಿ ಬಿಟ್ಟರೆ ಬಿಡಲಿ, ತನ್ನ ಕರ್ತವ್ಯವನ್ನು ತಾನು ಮಾಡಬೇಕಲ್ಲನೆ'' ಎಂದು ಯೋಚಿಸಿ ಸ್ನೇಹಪ್ರಭೆಯನ್ನು ಏಕಾಂತದಲ್ಲಿ ಕಂಡು, ಮೇಲೆ ಹೇಳಿದಂತೆ ವಿಷಯವನ್ನು ಎತ್ತಿದ. ಸ್ನೇಹಪ್ರಭೆಯೇನೂ ಅವನಿಗೆ ಅಪರಿಚಿತೆಯಾಗಿರಲಿಲ್ಲ. ಅವನ ಸಹೋದ್ಯೋಗಿಯಾಗಿದ್ದಳು.

"ದರ್ಶನಸಿಂಗ್, ನೀನು ಹಿಂದೂಸ್ಥಾನಿಗಳಿಗೆ ತಕ್ಕಂತೆ ಮಾತನಾಡುತ್ತಿದ್ದೀ. ಜಾತೀಯ ಮದಾಂಧತೆ ಮತ್ತು ಅಂಧಶ್ರದ್ಧೆಗಳಿಂದ ನಾವು ಕುರುಡರಾಗಿದ್ದೇವೆ. ಈ ವಿವಾಹದಲ್ಲಿ ತಪ್ಪೇನಿದೆ? ನಾನು ಮತ್ತು ರ್‍ಯಾಲಿ ಒಬ್ಬರನ್ನೊಬ್ಬರು ಪ್ರೀತಿಸುತ್ತೇವೆ. ಆದಕ್ಕಂತಲೇ ವಿವಾಹವಾಗಲಿದ್ದೇವೆ.''

"ಈ ಪ್ರೇಮ ಬರೀ ಬೂಟಾಟಿಕೆ ಸ್ನೇಹಪ್ರಭಾ. ಒಂದಲ್ಲ ಒಂದು ದಿನ ನೀವಿಬ್ಬರೂ ಬೇರೆಯಾಗಲಿಕ್ಕೇ ಬೇಕು. ಒಂದು ಪಕ್ಷ ರ್‍ಯಾಲಿ ನಿನ್ನನ್ನು ತ್ಯಜಿಸುವುದಿಲ್ಲವೆಂದಿಟ್ಟುಕೊಂಡರೂ, ನೀನಾದರೂ ರ್‍ಯಾಲಿಯನ್ನು ತ್ಯಜಿಸಬೇಕಾಗುತ್ತದೆ."

"ಏಕೆ?'' ಅರ್ಧ ಕುತೂಹಲ ಅರ್ಧ ಹ್ಯಾಸದಿಂದ ಕೂಡಿದ ನಗೆಯಿಂದ ಕೇಳಿದಳು ಸ್ನೇಹಪ್ರಭಾ.

"ನಾಳೆ ಯುದ್ಧ ಮುಗಿದ ಮೇಲೆ ರ್‍ಯಾಲಿಯ ಸಂಗಡ ನೀನು ಇಂಗ್ಲೆಂಡಿಗೆ ಹೋಗುವಿಯೋ?''

"ಹೋಗುವ ಪ್ರಸಂಗ ಬಂದರೆ ಹೋಗುವೆ"

"ಸ್ನೇಹಪ್ರಭಾ, ಇಂಗ್ಲೆಂಡ್ ಹಿಂದೂಸ್ಥಾನವಲ್ಲ. ನೀನು ಕರಿಯ ಜನಾಂಗಕ್ಕೆ ಸೇರಿದವಳೆಂಬುದನ್ನು ಮರೆಯಬೇಡ. ಇಂಗ್ಲೆಂಡಿನಲ್ಲಿ ರ್‍ಯಾಲಿಯ

ಬಂಧುಗಳು ನಿನ್ನ ಸಂಗಡ ಎಂದಿಗೂ ಸರಿಸಮಾನತೆಯನ್ನು ತೋರಿಸಲಾರರು. ಅವರು ನಿನ್ನನ್ನು ಹೀನವಾಗಿ ಕಾಣುವರು. ರ್‍ಯಾಲೆಯೂ ಸಹ ಅಲ್ಲಿಯ ವಾತಾವರಣಕ್ಕೆ ತಕ್ಕಂತೆ ನಿನ್ನನ್ನು ಅಸಡ್ಡೆಯಿಂದ ಕಾಣಬಹುದು. ಅಲ್ಲಿಯ ಸಮಾಜವು ನಿನ್ನನ್ನು ಬಹಿಷ್ಕರಿಸುವುದು. ಕೊನೆಗೆ ನೀನು ನಿನ್ನವರೆಂದು ಯಾರೂ ಇಲ್ಲದ ಆ ದೇಶದಲ್ಲಿ ಹೋಗಿ, ಯಾರಿಗೂ ಬೇಡವಾದ ವಸ್ತುವಾಗಿ ಫಜೀತಿ ಪಡುವಿ. ಆದುದರಿಂದ ಈಗಲೇ ಬುದ್ಧಿ ತಂದುಕೊಂಡು ನಿನ್ನ ಸರ್ವನಾಶವಾಗುವುದನ್ನು ನಿಲ್ಲಿಸು."

'ದರ್ಶನಸಿಂಗ್, ನೀನು ಹಿಂದಿನ ಶತಮಾನದಲ್ಲಿ ಹುಟ್ಟಬೇಕಾಗಿತ್ತು. ಈಗ ಮಾನವರೆಲ್ಲರೂ ಸರಿಸಮಾನರು ಎಂದು ಪರಿಗಣಿಸುವ ಕಾಲಬಂದಿದೆ."

"ಹೀಗೆ ನೀನು ತಿಳಿಯುವುದು ಮೂಢತನ."

"ರ್‍ಯಾಲೆ ನನಗಾಗಿ, ಹಿಂದೂಸ್ಥಾನದಲ್ಲೇ ಇದ್ದುಬಿಡಲು ಪ್ರತಿಜ್ಞೆ ಮಾಡಿದ್ದಾನೆ. ದರ್ಶನಸಿಂಗ್, ನೀನು ಸುಮ್ಮನೆ ಇಲ್ಲದ-ಸಲ್ಲದ ಸಂದೇಹಗಳನ್ನು ಕಲ್ಪಿಸಿಕೊಂಡು ಭಯಪಡುತ್ತಿರುವೆ. ನಾನೇನೂ ಅಜ್ಞಾನಿಯಲ್ಲ. ಸುಶಿಕ್ಷಿತಳಾಗಿರುವೆ. ನನ್ನ ಹಿತವನ್ನು ಕಾಪಾಡಿಕೊಳ್ಳಲು ನಾನು ಸಮರ್ಥಳಿರುವೆ. ನನಗೆ ಯಾರಿಂದಲೂ ಉಪದೇಶ ಬೇಕಾಗಿಲ್ಲ."

ದರ್ಶನಸಿಂಗ್ ಇನ್ನು ಮುಂದೆ ವಾದಿಸುವುದು ಸೌಜನ್ಯಕ್ಕೆ ಮೀರಿದುದೆಂದು ತಿಳಿದು, ತನ್ನ ಶುಭಾಶಯಗಳನ್ನು ಸ್ನೇಹಪ್ರಭೆಗೆ ತಲ್ಪಿಸಿ ತೆಪ್ಪಗೆ ಹೊರಟು ಹೋದ.

ಇತ್ತ ರ್‍ಯಾಲೆ ಮತ್ತು ಸ್ನೇಹಪ್ರಭಾ ಇವರ ಲಗ್ನವು ನಿಯಮಿಸಿದ್ದಂತೆ ನೆರವೇರಿತು.

ರ್‍ಯಾಲೆ ಮತ್ತು ಸ್ನೇಹಪ್ರಭಾ ಇವರ ಸಂಸಾರ ಸುಗಮವಾಗಿಯೇ ಸಾಗಿತ್ತು. ರ್‍ಯಾಲೆಯು ಕೊಡುತ್ತಿದ್ದ ಹಣ, ಸ್ನೇಹಪ್ರಭೆಗೆ ಬರುತ್ತಿದ್ದ ಸಂಬಳ ಇವೆರಡೂ ಸೇರಿದುದರಿಂದ, ಹಣದ ಅಡಚಣೆಯಂತೂ ಇರಲೇ ಇಲ್ಲ. ಹಣವು ಈಡಾದ ಮೇಲೆ ಇನ್ನೆಲ್ಲಿಯ ಕೊರತೆ?

ಯಾವಾಗಲಾದರೊಮ್ಮೆ, ದರ್ಶನಸಿಂಗ್ ಹೇಳಿದ 'ಜೋಕೆ,ಮುಂದೆ ಪಶ್ಚಾತ್ತಾಪ ಪಡಬೇಕಾದೀತು. ''ಎಂಬ ವಾಕ್ಯ ಜ್ಞಾಪಕ ಬಂದು, ಸ್ನೇಹ-ಪ್ರಭೆ ಗಡಗಡನೆ ನಡಗುತ್ತಿದ್ದಳು. ಅನಂತರ ''ದರ್ಶನಸಿಂಗ್ ಒಬ್ಬ ಮೂರ್ಖ. ಈಗ ನನಗೇನಾಗಿದೆ? ರ್‍ಯಾಲೆಯೂ ನನ್ನ ಸಂಗಡ ಅನ್ಯೋನ್ಯ-ನಾಗಿಯೇ ಇದ್ದಾನೆ. ಯಾವ ವಿಷಯದಲ್ಲೂ ಕುಂದಿಲ್ಲದಂತೆ ನಮ್ಮ ಸಂಸಾರ ನಡೆಯುತ್ತಿದೆ '' ಎಂದು ತನಗೆ ತಾನೇ ಸಮಾಧಾನ ಹೇಳಿ ಕೊಳ್ಳುತ್ತಿದ್ದಳು. ಏಕೋ ಏನೋ. ಎಷ್ಟು ಪ್ರಯತ್ನಪಟ್ಟರೂ,ದರ್ಶನಸಿಂಗ್‌ನ ಎಚ್ಚರಿಕೆಯ ಮಾತನ್ನು ಅವಳು ಮರೆಯಲಾಗಲಿಲ್ಲ.

ಈಗ್ಗೆ ಕೆಲವು ದಿನಗಳಿಂದ ಸ್ನೇಹಪ್ರಭೆ ತನ್ನ ಕೆಲಸವನ್ನು ಬಿಟ್ಟು ಬಿಟ್ಟಿದ್ದಳು. ಸಂಸಾರ ನಿರ್ವಹಿಸುವ ಜವಾಬ್ದಾರಿಯ ಜೊತೆಗೆ, ತಾನು ಬಸುರಿಯಾದುದೂ ಸೇರಿ, ಅವಳಿಗೆ ಇಷ್ಟವಿಲ್ಲದಿದ್ದರೂ ರಾಜೀನಾಮೆಯ ಅರ್ಜಿಯನ್ನು ಕೊಡಬೇಕಾಗಿ ಬಂದಿತ್ತು. ಮಕ್ಕಳು ಮರಿಗಳಾದ ಮೇಲೆ ಅವಳೇನು ಯುದ್ಧರಂಗದಲ್ಲಿ ಹೋಗಿ ಕೆಲಸ ಮಾಡಲು ಸಾಧ್ಯವೇ?

ಸ್ನೇಹಪ್ರಭೆ ಹೆರಿಗೆ ಆಸ್ಪತ್ರೆಗೆ ಹೋಗಿ ಇನ್ನೂ ಮೂರು ದಿನಗಳಾ-ಗಿರಲಿಲ್ಲ. ಹೆಂಡತಿಯನ್ನು ನೋಡಲು ಬಂದಿದ್ದ ರ್‍ಯಾಲೆ ಸ್ವಲ್ಪ ದುಃಖಿತ-ನಾದವನಂತ ಕಂಡು ಬರುತ್ತಿದ್ದ.

ಸ್ನೇಹಪ್ರಭೆ ಕೇಳಿದಳು 'ಏಕೆ ರ್‍ಯಾಲೆ ಮುಖ ಸಪ್ಪಗಿದೆ? ಮಗು ಚೆನ್ನಾಗಿಲ್ಲವೆಂದೋ!'

"ಇಲ್ಲ ಹಾಗಲ್ಲ. ಮಗು ಬಹಳ ಚೆನ್ನಾಗಿದೆ. ಆದರೆ.... ಪ್ರಭಾ.... ಒಂದು ವಿಷಯ' ಮುಖ ತಗ್ಗಿಸಿ ಮೆಲ್ಲಗೆ ನುಡಿದ ರ್‍ಯಾಲೆ.

"ಏನು ಹೇಳಿಬಿಡು ರ್‍ಯಾಲೆ, ಸಂಕೋಚವೇಕೆ?"

"ನನಗೆ ಹಿಂದೂಸ್ಥಾನದಿಂದ ಹೊರಗೆ ಯುದ್ಧರಂಗಕ್ಕೆ ಹೋಗಲು ಆಜ್ಞೆ ಬಂದಿದೆ.

"ಏನು! ಯುದ್ಧರಂಗಕ್ಕೆ!!" ಬೆಚ್ಚಿಬಿದ್ದಳು ಸ್ನೇಹಪ್ರಭಾ.

" ಹೆದರುವ ಕಾರಣವಿಲ್ಲ ಪ್ರಭಾ. ನಿನ್ನನ್ನು ಬಿಟ್ಟು ಹೋಗಲು ಮನಸ್ಸಿಲ್ಲದಿದ್ದರೂ ಹೋಗದೆ ವಿಧಿಯಿಲ್ಲ. ನಾನು ಎಲ್ಲಿದ್ದರೂ ನನ್ನ ಮನಸ್ಸು ಸದಾ ನಿನ್ನ ಹತ್ತಿರವೇ ಇರುತ್ತದೆ. ವಾರವಾರಕ್ಕೆ ಪತ್ರ ಹಾಕುತ್ತೇನೆ. ಹಣವನ್ನಂತೂ ಪ್ರತಿ ತಿಂಗಳೂ ತಪ್ಪದೆ ಕಳುಹಿಸುತ್ತೇನೆ" ಎಂದ ರ್‍ಯಾಲಿ.

ಸ್ನೇಹಪ್ರಭಾ ಅಳುತ್ತ ಕೇಳಿದಳು " ಎಲ್ಲಿಗೆ ಹೋಗುತ್ತೀ ರ್‍ಯಾಲಿ ?

" ಅದು ನನಗೇ ಗೊತ್ತಿಲ್ಲ. ನಾವು ಹೋಗಿ ಮುಟ್ಟಿದ ಮೇಲೆಯೇ ನಾನು ಎಲ್ಲಿದ್ದೇನೆ ಎಂಬುದು ತಿಳಿಯುವುದು. ನಮ್ಮ ಚಲನವಲನಗಳೆಲ್ಲ ಗೋಪ್ಯವಾಗಿಡುತ್ತಾರೆ ಎಂಬುದು ನಿನಗೆ ಗೊತ್ತೇ ಇದೆ. ನೀನು ಏನೂ ಯೋಚನೆ ಮಾಡಬೇಡ, ಪ್ರಭಾ ಡಾರ್ಲಿಂಗ್. ಹೋದ ತಕ್ಷಣ ಪತ್ರ ಬರೆಯುತ್ತೇನೆ. ನಿನ್ನ ಮಗುವಿನ ಆರೋಗ್ಯವನ್ನು ಕಾಪಾಡಿಕೋ. ನಾನು ಆದಷ್ಟು ಬೇಗ ಹಿಂದಿರುಗಲು ಪ್ರಯತ್ನಿಸುತ್ತೇನೆ " ಎಂದೂ ಮುಂತಾಗಿ ಅನೇಕ ಸಮಾಧಾನದ ಮಾತುಗಳನ್ನು ಹೇಳಿ ಹೊರಟು ಹೋದ ರ್‍ಯಾಲಿ.

ಮೂರನೆಯ ದಿನ ದರ್ಶನಸಿಂಗ್ ಸ್ನೇಹಪ್ರಭೆಯನ್ನು ನೋಡಲು ಬಂದ. ಸ್ನೇಹಪ್ರಭೆ ಅವನನ್ನು ನೋಡಿದ ತಕ್ಷಣವೇ ಅವಳ ಎದೆ ನಡುಗಿತು, ತುಟಿ ಒಣಗಿತು, ಮಾತನಾಡಲು ಶಕ್ತಿಯೇ ಬಾರದಂತಾಯಿತು.

" ಹೇಗಿದ್ದೀಯಾ ಸ್ನೇಹಪ್ರಭಾ ?"

" ಚೆನ್ನಾಗಿದ್ದೇನೆ " ಎಂದು ಮುಖ ತಿರುವಿದಳು ಸ್ನೇಹಪ್ರಭಾ.

ಇದನ್ನು ಕಂಡು ದರ್ಶನಸಿಂಗ್ ಹೇಳಿದ. " ನಾನು ನಿನ್ನನ್ನು ಕಂಡು ಹೋಗಲು ಬಂದಿದ್ದು, ನಿನ್ನ ಮನಸ್ಸಿಗೆ ಇರಲಿಲ್ಲವೆಂದು ಕಾಣಿ-ಸುತ್ತೆ. ಆದರೂ ಸಹ ಬರಬೇಕಾಗಿದೆ. ನಿನಗೆ ನಿಜಸ್ಥಿತಿಯೊಂದನ್ನು ತಿಳಿಸಬೇಕಾಗಿದೆ."

ಸ್ನೇಹಪ್ರಭೆಯ ಕಣ್ಣುಗಳರಳಿದವು. ಮಾತನಾಡಲು ಬಾಯಿ ಬರದೇ ಹೋಗಲು ಕಣ್ಣುಗಳಿಂದಲೇ ಕೇಳಿದಳು "ಏನು" ಎಂದು. ಅದರಲ್ಲಿ ವ್ಯಗ್ರತೆಯಿತ್ತು.

"ನಿನ್ನೆ ರ್‍ಯಾಲಿ ಹೋದ ಮೇಲೆ ಆತನ ಕೆಲಸವನ್ನು ನನಗೆ ಕೊಟ್ಟರು. ಫೈಲುಗಳನ್ನು ತಿರುವಿಹಾಕುವಾಗ ರ್‍ಯಾಲಿಯು ಕೊಟ್ಟಿದ್ದ ಒಂದು ಅರ್ಜಿಯು ನನಗೆ ಕಂಡುಬಂದಿತು. ಅದರಲ್ಲಿ ಆತನು ತನಗೆ ಹಿಂದೂಸ್ಥಾನದಿಂದ ಹೊರಗೆ ಎಲ್ಲಿಯಾದರೂ ಆಗಲಿ, ವರ್ಗಾಯಿಸಬೇಕೆಂದು ಬೇಡಿಕೊಂಡಿದ್ದ. ಅದರಂತೆ ಆತನನ್ನು ವರ್ಗಮಾಡಲಾಯಿತು."

ಸ್ನೇಹಪ್ರಭಾ ಬಿಕ್ಕಿಬಿಕ್ಕಿ ಅಳಹತ್ತಿದಳು.

"ಈಗ ಅತ್ತರೇನು ಪ್ರಯೋಜನ ಪ್ರಭಾ. ಆಗ ನನ್ನ ಎಚ್ಚರಿಕೆಯ ಮಾತುಗಳನ್ನು ತೃಣೀಕರಿಸಿದೆ. ಕೈ ಮೀರಿಹೋಗಿದೆ. ಧೈರ್ಯದಿಂದ ಒದಗಿರುವ ಕಷ್ಟಗಳನ್ನು ಎದುರಿಸು. ನಾನು ಹೆಚ್ಚಿಗೆ ಹೇಳಲು ಬಯಸುವುದಿಲ್ಲ" ಎಂದು ದರ್ಶನಸಿಂಗ್ ಎದ್ದು ನಮಸ್ಕರಿಸಿ ಬಾಗಿಲಕಡೆ ನಡೆದನು.

"ದರ್ಶನಸಿಂಗ್, ರ್‍ಯಾಲಿ ಎಲ್ಲಿಗೆ ಹೋದ!" ಎಂದು ಸ್ನೇಹಪ್ರಭೆ ಕೂಗಿದಳು. ಅವಳ ಆ ಕೂಗಿನಲ್ಲಿ ಆಸ್ಪತ್ರೆಯನ್ನು ನಡುಗಿಸುವಂಥ ಶಕ್ತಿಯಿತ್ತು.

"ನನಗೆ ಗೊತ್ತಿಲ್ಲ. ನನಗೇಕೆ, ನಮ್ಮಲ್ಲಿ ಯಾರಿಗೂ ಗೊತ್ತಿಲ್ಲ."

ಸಾಕು, ಸ್ನೇಹಪ್ರಭೆಗೀಗ ಹುಚ್ಚು ಹಿಡಿದಿದೆ. ಅರ್ಧನಗ್ನಾವಸ್ಥೆಯಲ್ಲಿ ಬೀದಿ ಬೀದಿ ತಿರುಗುತ್ತಿರುತ್ತಾಳೆ. ಕಂಡಕಂಡ ಪೋಸ್ಟಾಫೀಸುಗಳಿಗೆ ಹೋಗಿ "ನನಗೆ ಪತ್ರ ಬಂದಿದೆಯೇ!" ಎಂದು ಕೇಳುತ್ತಿರುತ್ತಾಳೆ.

ಅವಳ ಮಗುವನ್ನು ಆಸ್ಪತ್ರೆಯವರೇ ಯಾವುದೋ ಒಂದು ಮಿಷನಿಗೆ ಕೊಟ್ಟುಬಿಟ್ಟರು.

ರ್‍ಯಾಲಿಯಿಂದ ಇಲ್ಲಿಯವರೆಗೂ ಪತ್ರವೂ ಇಲ್ಲ, ಹಣವೂ ಇಲ್ಲ.

(ಏಪ್ರಿಲ್ ೩೦, ೧೯೪೭, "ಸ್ವತಂತ್ರ", ಬೆಂಗಳೂರು)

# ಮಿಸ್ ಬಾಬು ಸುಂದರಂ!

'ಯಾರವಳು ?'

'ನಿಮಗೆ ಗೊತ್ತಿಲ್ಲ! ಅವಳೇ ಮಿಸ್. ಬಾಬು ಸುಂದರಂ. ಈ ಕಾರ್ಖಾನೆಯಲ್ಲಿ ಕೆಲಸ ಮಾಡುವ ಹೆಣ್ಣುಗೂಲಿಗಳ ಮೇಸ್ತ್ರಿ.'

'ಹಾಗೋ ?'

ಹೊಸದಾಗಿ ಬಂದ ಜಮಾದಾರರು, ತಮ್ಮ ಸ್ಥಳವನ್ನೂ, ಮತ್ತು ತಮ್ಮ ಕೈ ಕೆಳಗೆ ಕೆಲಸ ಮಾಡಲಿರುವವರೆಲ್ಲರ ಪರಿಚಯವನ್ನೂ ಮಾಡಿಕೊಳ್ಳುತ್ತಿದ್ದರು.

'ಅವಳು ಈ ಕಾರ್ಖಾನೆಯಲ್ಲಿ ಬಲು ಪ್ರಾಬಲ್ಯಳಾದ ಹೆಂಗಸು. ದೊಡ್ಡ ಧೊರೆಯನ್ನು ಮೊದಲ್ಗೊಂಡು, ಎಲ್ಲ ಆಫೀಸರುಗಳನ್ನೂ ತನ್ನ ಕೈಯಲ್ಲಿ ಇಟ್ಟುಕೊಂಡಿದ್ದಾಳೆ. ದೊಡ್ಡ ಧೊರೆಗಂತೂ ಅವಳ ಮಾತೆಂದರೆ ವೇದವಾಕ್ಯ. ಹಾಗೆಂತಲೇ ಪ್ರತಿಯೊಬ್ಬರೂ ಅವಳನ್ನು ಕಂಡರೆ ಹೆದರಿ ಸಾಯುತ್ತಾರೆ. ಅವಳು ಯಾರನ್ನು ಬೇಕಾದರೂ ಗಂಡಾಂತರದಲ್ಲಿ ಸಿಗಿಸಬಲ್ಲಳು. ಅಪಾಯಕ್ಕೀಡಾದವರನ್ನು ರಕ್ಷಿಸಬಲ್ಲಳು. ಏಕೆ, ಮೊನ್ನೆ ತಾನೆ ಇಬ್ಬರು ಆಫೀಸರುಗಳನ್ನು ಕೋರ್ಟ್ ಮಾರ್ಷಲ್‌ನಿಂದ ಕಾಪಾಡಿದಳಲ್ಲ!'

'ನಿಜವಾಗಿಯೂ !'

'ಅಹುದು. ವಿಷಯವೇನೆಂದರೆ, ಆ ಇಬ್ಬರು ಆಫೀಸರರೂ, ತಮ್ಮ ತಮ್ಮ ಬೂಟುಗಳನ್ನು ಕಾರ್ಖಾನೆಯ 'ಬೂಟ್ ಮೇಕರ್ ಶಾಪ್'ನಲ್ಲಿ ಅಪ್ಪಣೆಯಿಲ್ಲದೆ ರಿಪೇರಿ ಮಾಡಿಸಿಕೊಂಡಿದ್ದರು. ಇದು ಹೇಗೋ ಏನೋ ದೊಡ್ಡ ಧೊರೆಗೆ ಗೊತ್ತಾಗಿಹೋಯಿತು. ಸರಿ, ಆತನು ಆ ಆಫೀಸರ್-ಗಳನ್ನು ದಸ್ತಗಿರಿ ಮಾಡಿಬಿಟ್ಟ!'

'ಆಮೇಲೆ!'

'ಆಮೇಲೆ ಅವರಿಬ್ಬರೂ ಮಿಸ್. ಬಾಬು ಸುಂದರಂನ ಮೊರೆ ಹೊಕ್ಕರು. ಅವಳೇನು ಸುಮ್ಮನೆ ಕೆಲಸ ಮಾಡುವಳೇ! ನೂರು ನೂರು ರೂಪಾಯಿಗಳ ಎರಡು ಹಸರು ನೋಟುಗಳು ಅವಳ ಉಡಿಯಲ್ಲಿ ಬಿದ್ದ ಸುರುಘಳಿಗೆಯಲ್ಲಿಯೇ, ಅದೇ ದೊಡ್ಡ ಘೋರೆಯಿಂದ ಅವರಿಬ್ಬರ ಬಿಡು-ಗಡೆಯ ಆಜ್ಞೆಯನ್ನು ಜಾರಿಮಾಡಿಸಿಬಿಟ್ಟಳು!'

'ಛೀ! ನಾಚಿಕೆಗೇಡು!' ನಾನೇನಾದರೂ ಅಂಥ ಪ್ರಸಂಗದಲ್ಲಿ ಸಿಕ್ಕುಬಿದ್ದಿದ್ದರೆ ಒಬ್ಬ ಹೆಂಗಸಿನ ಮೊರೆಹೊಕ್ಕು ಕ್ಷೇಮವಾಗಿರುವುದಕ್ಕಿಂತ ಶಿಕ್ಷೆಯನ್ನೇ ಸಂತೋಷವಾಗಿ ಸ್ವೀಕರಿಸುತ್ತಿದ್ದೆ' ಎಂದರು ಜಮಾದಾರರು.

ನಿಜವಾಗಿಯೂ ಮಿಸ್ ಬಾಬು ಸುಂದರಂ, ಪ್ರಪಂಚದ ಆ ಭಾಗ-ದಲ್ಲಿ ಅತಿ ಪ್ರಾಬಲ್ಯವಾಗಿದ್ದಳು. ಆ ಕಾರ್ಖಾನೆಯಲ್ಲಿ ಬೇಕಾದಷ್ಟು ಹೆಂಗಸರಿದ್ದರೇನೋ ನಿಜ, ಆದರೆ ಅವರೆಲ್ಲ ಕೂಲಿಗಳಾಗಿದ್ದರು. ತೀವ್ರ-ವಾದ ಕಾಮಪಿಪಾಸೆಯಿಂದ ಬಾಧಿತರಾದ ಸಾವಿರಾರು ಯೋಧರಿಂದ ಕೂಡಿದ ಆ ದೊಡ್ಡ ಕಾರ್ಖಾನೆಯಲ್ಲಿ, ಈಕೆಯೊಬ್ಬಳೇ ಸ್ವಲ್ಪ ನಾಗರೀಕತೆಯುಳ್ಳ-ವಳೂ, ಮತ್ತು ಸುಶಿಕ್ಷಿತಳೂ ಆಗಿದ್ದಳು. ಅವಳೇನು ಕುರೂಪಿಯಲ್ಲ-ದಿದ್ದರೂ ಸುಂದರಳು ಮಾತ್ರ ಅಲ್ಲ. ಹೆಂಗಸರೇನಾದರೂ ಅತಿ ವಿರಳವಾಗಿ ಹೋಗಿಬಿಟ್ಟರೆ, ಅವರ ಆವಶ್ಯಕತೆಯೂ ಹೆಚ್ಚಾಗಿ ಇದ್ದುಬಿಟ್ಟರೆ, ಎಂಥ ಉತ್ತಮ ದರ್ಜೆಯ ಬಿಳಿಯನೇ ಆಗಿರಲಿ ಆತನಿಗೆ 'ವರ್ಣಭೇದ' ಸ್ವಲ್ಪವೂ ಅಡ್ಡಿಯಾಗುವುದೇ ಇಲ್ಲ. ಅಂದಮೇಲೆ ಮಿಸ್. ಬಾಬು ಸುಂದರಂಗೆ ಅಷ್ಟು ಬೆಲೆ ಬಂದರೆ ಅದು ಏನು ಮಹಾ ಆಶ್ಚರ್ಯ!

ಮಿಸ್. ಬಾಬು ಸುಂದರಂಗೆ ತನ್ನ ಬೆಲೆ ಎಷ್ಟರಮಟ್ಟಿಗೆ ಏರಿದೆ-ಯೆಂಬುದು ಗೊತ್ತಿರದಿರಲಿಲ್ಲ. ತನಗೆ ಇದುರಾಳಿ ಇಲ್ಲದಿರುವುದೂ, ತನ್ನ ಮನೋಭೀಷ್ಟಗಳೆಲ್ಲವನ್ನೂ ಈಡೇರಿಸಿಕೊಳ್ಳುವಷ್ಟು ಚೈತನ್ಯ ತನ್ನಲ್ಲಿ ಉಂಟಾಗಿರುವುದೂ, ಅವಳಿಗೆ ಚೆನ್ನಾಗಿ ತಿಳಿದಿತ್ತು. ತಾನು ಯಾರು,

ತನ್ನ ತಂದೆ ತಾಯಿಗಳು ಯಾರು ಎಂಬುದು ಆಕೆಗೇ ಗೊತ್ತಿರಲಿಲ್ಲ. ತಾನು ಒಂದು ಮಿಷನರಿಯಲ್ಲಿ ವಾಸಿಸುತ್ತಾ ವಿದ್ಯಾರ್ಜನೆ ಮಾಡಿದ್ದೊಂದು ಬಿಟ್ಟರೆ, ತನ್ನ ಬಾಲ್ಯಾವಸ್ಥೆಯ ವಿಷಯವಾಗಿ ಆಕೆಗೆ ಏನೊಂದೂ ತಿಳಿದಿರಲಿಲ್ಲ. ಮಿಷನರಿಯು, ಮಿಕ್ಕುಳಿದ ವಿಷಯಗಳಲ್ಲಿ ಅವಳನ್ನು ತರಬೇತು ಮಾಡದೇ ಇದ್ದರೂ, ಸರ್ವಸಾಧಾರಣವಾದಂಥ ಗುಮಾಸ್ತೆ ವೃತ್ತಿಯಿಂದಲಾದರೂ ಹೊಟ್ಟೆ ಹೊರೆಯುವಷ್ಟು ಚೈತನ್ಯವನ್ನು ಆಕೆಯಲ್ಲಿ ಉಂಟುಮಾಡಿತ್ತು. ಮೊದಲೇ ಯುದ್ಧಕಾಲ, ಅದರಲ್ಲೂ ಪರದೇಶಗಳಿಂದ ಲಕ್ಷಾಂತರ ಸೇನೆಗಳು, ಭಾರತಕ್ಕೆ ಬಂದು ಬೀಡುಬಿಟ್ಟಿವೆ. ಅಂದಮೇಲೆ ಮಿಸ್. ಬಾಬುಸುಂದರಂ ಅಂಥವರಿಗೆ ಜಿರಿ ಇಲ್ಲದೆ ಇರುತ್ತದೆಯೆ!

ಆ ಕಾರ್ಖಾನೆಯಲ್ಲಿ ಆಕೆಯನ್ನು ನೇಮಿಸಿಕೊಂಡಾಗ, ಆಕೆಯ ದಿನಗೂಲಿ ಮೂರು ರೂಪಾಯಿಗಳು ಎಂದು ಗೊತ್ತುಮಾಡಲ್ಪಟ್ಟಿತ್ತು. ಆದರೆ, ಆಕೆಯು ತಾನು ಬಂದ ಕೆಲವೇ ದಿನಗಳಲ್ಲಿ, ತನ್ನ ಚಾಕರಿ ಎಷ್ಟು ಬೆಲೆಯುಳ್ಳದೆಂಬುದನ್ನು ದೊಡ್ಡ ಧೊರೆಗೆ ಚೆನ್ನಾಗಿ ಮನವರಿಕೆ ಮಾಡಿ ಕೊಟ್ಟ ಮೇಲೆ, ಆಕೆಯ ದಿನಗೂಲಿ, ಮೂರು ರೂಪಾಯಿಗಳಿಂದ ಐದು ರೂಪಾಯಿಗಳಿಗೆ ಏರಿತ್ತು! ಈಗ ಅವಳ ಕಷ್ಟಗಳೆಲ್ಲವೂ ಪರಿಹಾರವಾಗಿಹೋಗಿತ್ತು. ಇಂಥ ಸುಸಮಯವನ್ನು ಕರುಣಿಸಿದುದಕ್ಕಾಗಿ, ವಿಕ್ಟೋರ್‌ನನ್ನು ಅವಳು ಬಾರಿ ಬಾರಿಗೂ ಸ್ಮರಿಸುವಳು. ಮೊದಲಿನಂತೆ ಹಣವಿಲ್ಲದುದರ ಕೊರತೆ ಈಗ ಅವಳನ್ನು ಬಾಧಿಸುತ್ತಿರಲಿಲ್ಲ. ಅಷ್ಟೇಕೆ, ಇಂಥ ದುರ್ಭಿಕ್ಷದಲ್ಲೂ ಆಕೆಯ ಹೆಸರಿನಲ್ಲಿ ಮೂರು ಸಾವಿರ ರೂಪಾಯಿ ಬ್ಯಾಂಕಿನಲ್ಲಿ ಬಿದ್ದಿತ್ತು! ತನ್ನಂಥ ಹೆಂಗಸರು ತಿಳಿದಿರಬೇಕಾದಂಥ ಚಾತುರ್ಯಗಳೆಲ್ಲವೂ ಆಕೆಗೆ ಗೊತ್ತಿದ್ದಿತು. ಆ ಉಪಾಯಗಳೆಲ್ಲವನ್ನೂ ಆಕೆ ಉಪಯೋಗಿಸಿಯೂ ಇದ್ದಳು! ಹಾ! ದೇವರೇ!! ಅನಾಥರಕ್ಷಕಾ!! ಅಬಲೆಯರಿಗೆ ನೀನೆಷ್ಟು ಉದಾರಿಯಾಗಿರುವೆಯಪ್ಪಾ!!!

ಅಬ್ಬಾ! ಅವಳ ಥಳಕೇನು! ವಯ್ಯಾರವೇನು! ಅವಳು ಒಂದೇ ಸೀರೆಯನ್ನು ಒಟ್ಟಿಗೆ ಎರಡು ದಿನಗಳಾದರೂ ಉಟ್ಟುಕೊಂಡು ಬಂದುದನ್ನು

ಯಾರೂ ನೋಡಿರಲಿಲ್ಲ. ಆಹಾ! ಆಕೆಯ ಬಣ್ಣಬಣ್ಣದ ಸೀರೆಗಳೆಷ್ಟು
ಅಂದ! ಆಕೆಯು ಅವುಗಳನ್ನು ಉಡುವುದೆಷ್ಟು ಚಂದ!! ಆಕೆಯ ಮುಡಿ
ಯಲ್ಲಿ ನೇತಾಡುವ ಬಣ್ಣ ಬಣ್ಣದ ಹೂ ಗೊಂಚಲು ಎಂಥ ಸುವಾಸನೆ
ಯನ್ನು ಬೀರುತ್ತಿದ್ದುವು! ಅವಳು ಹಾಗೆ ಮುಗ್ಗುಲಾಗಿ ಹಾದುಹೋದರೆ
ಮೂಗಿನ ಹೊಳ್ಳೆಗಳು ಬಿರಿದು ಸಿಳ್ಳುತ್ತಿದ್ದುವು! ಒಟ್ಟಿನಲ್ಲಿ ಹೇಳುವುದಾದರೆ
ಆಧುನಿಕ ಕಾಲಕ್ಕೆ ತಕ್ಕಂತೆ, ಶಾಸ್ತ್ರೋಕ್ತವಾಗಿ ವೇಷಭೂಷಣ ಮಾಡು
ತ್ತಿದ್ದಳಾಕೆ. ಕೊನೆಗೆ ಪಟ್ಟಣದ ಹೆಂಗಸರ ಕೈಯಲ್ಲಿ ನೇತಾಡುವ ಲೆದರ್
ಬ್ಯಾಗ್ ಸಹ. ಆಕೆಯ ಕೈಯನ್ನು ಅಲಂಕರಿಸುತ್ತಿತ್ತು.

ಹೀಗೆ ಸಾಲಂಕೃತೆಯಾದ ಆಕೆ, ನವಿಲನ್ನು ನಾಚಿಸುವಂಥ ಒಯ್ಯಾ-
ರದ ನಡುಗೆಯಲ್ಲಿ, ಘನ ನಿತಂಬಗಳೆರಡನ್ನೂ ಹಾಗೊಂದು ಸಲ,
ಹೀಗೊಂದು ಸಲ ಕುಣಿಸುತ್ತಾ, ಚಂಚಲ ಕುಡಿಹುಬ್ಬುಯುಗಳಿಂದಲೇ ನೋಡು-
ವವರಿಗೆ ಆಹ್ವಾನವನ್ನು ಕೊಡುತ್ತಾ, ದೊಡ್ಡ ಧೊರೆಯಿಂದ ಪುಟ್ಟ ಧೊರೆಗೆ,
ಪುಟ್ಟ ಧೊರೆಯಿಂದ ಮರಿ ಧೊರೆಗೆ, ಭೇಟಿಯಾಗುವ ನೆವದಿಂದ ತಿರುಗಲು
ಹೊರಟಳೆಂದರೆ, ಅಂಥ ಸಂದರ್ಭದಲ್ಲಿ ಸಿಕ್ಕುಬಿದ್ದಿರುವ ಎಂಥ ಭೀಷ್ಮನಿಗೇ
ಆಗಲಿ, ಅವಳನ್ನು ಇನ್ನೊಮ್ಮೆಯಾದರೂ ನೋಡಲೇಬೇಕೆಂಬ ದುರಾಶೆ-
ಯನ್ನು ಬದಿಗೊತ್ತಲು ಆಗುತ್ತಿರಲೇ ಇರಲಿಲ್ಲ! ಅದೇಕೆ, ಭಾರಿ ಭಾರಿ
ಮೂಟೆಗಳನ್ನು ಹೊತ್ತುಕೊಂಡು ಬೊಗ್ಗಿ ನಿಂತಿರುವ ಕೂಲಿಗಳೂ ಸಹ
ಬಹು ಪ್ರಯಾಸದಿಂದ ತಲೆಯೆತ್ತಿ ಅವಳನ್ನು ನೋಡಲು ಹಾತೊರೆ-
ಯುತ್ತಿದ್ದರು. ಬಲು ತೃಪ್ತಿಯನ್ನು ಸೂಚಿಸುವಂಥ ದೇವಸ್ಥಾನದ ಗೂಳಿ-
ಯಂತಹ ಕಣ್ಣುಗಳಿಂದ, ತನ್ನದೇ ಆದ ಸಾಮ್ರಾಜ್ಯವನ್ನು ನೋಡಿ-
ದಾಗಲೆಲ್ಲಾ, ಬಾಬು ಸುಂದರಂನ ಮನಸ್ಸು ಸಂತೋಷದಿಂದ ಕುಣಿಯು-
ತ್ತಿತ್ತು. ಸಮಾಜದಿಂದ ಬಹಿಷ್ಕರಿಸಲ್ಪಟ್ಟ ಯೋಧರಿಗೆ, ಆಕೆಯು ನಿಜ-
ವಾಗಿಯೂ ಒಬ್ಬ ದೇವತೆಯೇ ಆಗಿದ್ದಳು. ಇವಳಿಂದಾಗಿ ಕಾರ್ಖಾನೆಯ
ವಾತಾವರಣವೇ ಒಂದು ತೆರನಾದ ಬದಲಾವಣೆ ಹೊಂದಿತ್ತು.

ಅವಳ ಕೈಕೆಳಗೆ ಕೆಲಸ ಮಾಡುವ ಕೂಲಿ ಹೆಂಗಸರಿಗೆ ಇವಳನ್ನು
ಕಂಡರೆ ತುಂಬಾ ಹೊಟ್ಟೆಕಿಚ್ಚು! “ಅಲ್ಲಾ, ನಾವುಗಳು, ಬೆಳಗ್ಗಿನಿಂದ

ಸಂಜೆಯವರೆಗೂ ಮೈ ಮುರಿದು ದುಡಿದರೂ ಬರೀ ಎಂಟಾಣೆ ದಿನಗೂಲಿ ಸಿಗುತ್ತದೆ; ಏನೂ ಕೆಲಸ ಮಾಡದೇ ಇದ್ದ ಆಕೆಗೆ ಮಾತ್ರ ಐದು ರೂಪಾಯಿ-ಗಳ ದಿನಗೂಲಿಯೇಕೆ? " ಎಂದು ಹಳಹಳಿಸುವರು. ಕೆಲವು ಯುವತಿ-ಯರಂತೂ " ಈಕೆಗೆ ನಾವು ಯಾವುದರಲ್ಲಿ ಕಮ್ಮಿ " ಎಂದು ಧಿಃಕರಿಸು-ವಷ್ಟು ಸ್ಥಿತಿಗೆ ಬಂದುಬಿಟ್ಟಿದ್ದರು. ಒಂದು ಮಾತನ್ನು ಮಾತ್ರ ಎಲ್ಲರೂ ಒಪ್ಪುತ್ತಿದ್ದರು. ಅದೇನೆಂದರೆ ಸುಂದರಂನಲ್ಲಿ, ಇಂಗ್ಲೀಷ್‌ನಲ್ಲಿ ಸ್ವಲ್ಪ-ಮಟ್ಟಿಗಾದರೂ ಓದಿ, ಬರೆದು, ಮಾತಾಡುವಷ್ಟು ಚೈತನ್ಯವಿರುವುದು. ಅಷ್ಟು ಮಾತ್ರ ತಮ್ಮಲ್ಲಿ ಇಲ್ಲದೇ ಹೋಯಿತಲ್ಲಾ ಎಂದು ದುಃಖ ಪಡು-ವರು. ಇಂಗ್ಲೀಷ್ ಸಾಹಿತ್ಯ ಭಂಡಾರದಲ್ಲಿ, ತಾವೂ ಸಹ ಭಾಗಿಯಾಗುವ ಸಂದರ್ಭವನ್ನು ತಮಗೆ ದೊರಕಿಸಿ ಕೊಡದಿದ್ದುದಕ್ಕಾಗಿ ತಮ್ಮ ತಮ್ಮ ತಂದೆ-ತಾಯಿಗಳನ್ನು ಮನಸಾರ ಶಪಿಸುವರು ಆ ಹೆಣ್ಣುಗೂಲಿಗಳು! ತಮಗೂ ಅವಳಂತೆ ಅಲ್ಪ ಸ್ವಲ್ಪ ಇಂಗ್ಲೀಷ್ ಬರುತ್ತಿದ್ದರೆ, ಏನೂ ಕೆಲಸ ಮಾಡದೇ ಇದ್ದರೂ ಐದು ರೂಪಾಯಿ ದಿನಗೂಲಿ ಸಿಗುತ್ತಿರಲಿಲ್ಲವೇ?

**ಹೊ**ಸದಾಗಿ ಬಂದ ಜಮಾದಾರ್ ಸಾಹೇಬ್ ಸೇನ್‌ಗುಪ್ತರನ್ನು ಸುಂದರಂ ಮತ್ತು ಆಕೆಯು ಕೂಲಿಯಾಳುಗಳ ಮೇಲಾಧಿಕಾರಿಯನ್ನಾಗಿ ನಿಯಮಿಸಿದ ಆಜ್ಞೆ ಜಾರಿಗೆ ಬಂದ ತಕ್ಷಣ ಸೇನ್ ಗುಪ್ತರ ಮೇಲೆ ಕಾರ್ಖಾನೆಯ ಎಲ್ಲ ಕಡೆಗಳಿಂದಲೂ ಅಭಿನಂದನೆಗಳ ವೃಷ್ಟಿಯಾಯಿತು! ಅನುಭವಸ್ಥನಲ್ಲದ ಈ ಯುವಕನಿಗೆ, ತನ್ನ ಹೊಸ ಅಧಿಕಾರದ ಪರವಾಗಿ ತನಗೇಕೆ ಇಷ್ಟು ಶ್ಲಾಘನೆಗಳು ಎಂಬುದೇ ಹೊಳೆಯಲಿಲ್ಲ. " ನಾನು ಆಧುನಿಕ ವಿಚಾರದವನು. ಎಲ್ಲ ವಿಷಯಗಳಲ್ಲೂ ಗಂಡಸರನ್ನೇ ನಂಬಿ ಕೊಂಡಿರುವ ಹಿಂದೂಸ್ಥಾನದ ಹೆಂಗಸರು, ಹೆಂಗಸರನ್ನು ಗಂಡಸರ ಕೈ-ಗೊಂಬೆಗಳನ್ನಾಗಿ ಮಾಡುವ ನವ್ಯದ ಸಮಾಜದ ರೂಢಿಯನ್ನು ನಾಶ ಮಾಡಿ, ತಮ್ಮ ದಾಸ್ಯದ ಶೃಂಖಲೆಗಳನ್ನು ಮುರಿಯಬೇಕಾದರೆ ಇದೇ ಸುಸಮಯ! ಸವ್ಯದ ಯುದ್ಧದಿಂದ ಉಂಟಾಗಿರುವ ಇಂಥ ಸುಸಮಯ-ವನ್ನು ನಮ್ಮ ಭಾರತದ ಯುವತಿಯರು ಚೆನ್ನಾಗಿ ಉಪಯೋಗಿಸಿ

ಕೊಳ್ಳಲಿ. ಸುಶಿಕ್ಷಿತ ತರುಣಿಯರು ಇಂಥ ಚಿನ್ನದಂತಹ ಸಮಯವನ್ನು ಕಳೆದುಕೊಳ್ಳಕೂಡದು. ನಮ್ಮ ಹೆಂಗಸರು ಹೆಚ್ಚು ಹೆಚ್ಚಾಗಿ ಮುಂದೆ ಬಂದು, ತಮ್ಮ ಕಾಲಮೇಲೆ ನಿಲ್ಲುವುದನ್ನು ಕಲಿಯಲಿ. ಅಂದರೇನೆ ನಮ್ಮ ಮಹಿಳೆಯರು ಗುಲಾಮಗಿರಿಯಿಂದ ಬಿಡುಗಡೆಯನ್ನು ಕಾಣಬಹುದು. ಮಿಸ್. ಬಾಬು ಸುಂದರಂನಂಥ ಆದರ್ಶ ಯುವತಿ ನನ್ನ ಕೈ ಕೆಳಗೆ ಕೆಲಸ ಮಾಡುವುದು ನನಗೊಂದು ಹೆಮ್ಮೆಯ ವಿಷಯವಲ್ಲವೆ! ಆಕೆಯ ಯಶಸ್ಸಿಗೆ ನಾನು ಕೈಯಿಂದಾದಷ್ಟು ಪ್ರಯತ್ನಿಸುತ್ತೇನೆ. ಆಹಾ! ಈಕೆಯ ಮೇಲ್ಪಂಕ್ತಿಯನ್ನು ನಮ್ಮ ಭಾರತದ ಯುವತಿಯರೆಲ್ಲರೂ ಅನುಸರಿಸಿದ್ದರೆ, ನಾವು ಅನುಭವಿಸುತ್ತಿರುವ ಎಷ್ಟೋ ಕಷ್ಟಗಳು ಪರಿಹಾರವಾಗಿ ಹೋಗುತ್ತಿರಲಿಲ್ಲವೆ" ಎಂದು ಆದರ್ಶ ಜೀವಿ ಸೇನ್ ಗುಪ್ತರು, ತಮ್ಮನ್ನು ಅಭಿನಂದಿಸಲು ಬಂದ ತಮ್ಮ ಸಂಗಡಿಗರೊಡನೆ ಉದ್ಗಾರ ತೆಗೆದರು. ಸೇನ್ ಗುಪ್ತರ ವಿಚಾರಗಳು, ಅವರ ಮನಸ್ಸಿನ ಮೇಲೆ ಯಾವ ಪರಿಣಾಮವನ್ನೂ ಉಂಟುಮಾಡದೇ ಹೋದರೂ, 'ಈ ಮನುಷ್ಯನಿಗೆ ಹುಚ್ಚು ಹಿಡಿಯಲು ಇನ್ನು ಬಹಳ ದಿನಗಳು ಬೇಕಿಲ್ಲ' ಎಂಬ ವಿಚಾರ ಮಾತ್ರ ಎಲ್ಲರಲ್ಲೂ ಸುಳಿದುಹೋಯಿತು.

ದಿನಗಳು ಕಳೆದಂತೆ ಮಿಸ್·ಬಾಬು ಸುಂದರಂಗೆ ಯಾವ ಕೆಲಸವನ್ನು ಮಾಡಲೂ ಮನಸ್ಸಿಲ್ಲದೇ ಇರುವುದು, ಸೇನ್ ಗುಪ್ತರಿಗೆ ಗೊತ್ತಾಯಿತು. ಹಾಗೆ ನೋಡಿದರೆ ಆಕೆಯು ಏನೂ ಕೆಲಸಮಾಡುತ್ತಲೇ ಇರಲಿಲ್ಲ. ಈಕೆಗೆ ಆಫೀಸರುಗಳ ಹಿಂದೆ ಹಿಂದೆ ತಿರುಗುವಂಥ ಕೆಲಸ ಏನಿದೆ ಎಂಬುದೇ ಜಮಾದಾರರಿಗೆ ಅರ್ಥವಾಗಲಿಲ್ಲ. ಈಗ್ಯೆ ಕೆಲವು ದಿನಗಳಿಂದಂತೂ, ಕಾರ್ಖಾನೆಗೆ ಬಂದರೂ, ಕೆಲಸದ ಮೇಲೆ ಹಾಜರಾಗುತ್ತಿರಲಿಲ್ಲ ಸುಂದರಂ. ಇದರಿಂದಾಗಿ ಹೆಣ್ಣುಗೂಲಿಗಳ ಮೇಲ್ವಿಚಾರಣೆ ಮಾಡುವ ಕೆಲಸವೂ ಸಹ ಜಮಾದಾರ್ ಸಾಹೇಬರ ಮೇಲೆಯೇ ಬಿದ್ದಿತು. ಬಂಗಾಲಿಯಾದ ಅವರು, ತಮ್ಮ ಸುತ್ತ ನೆರೆದಿರುವ ತಮಿಳುನಾಡು ಮಹಿಳೆಯರ ಸಂಗಡ ಮಾತಾಡುವ ಬಗೆಯಾದರೂ ಹೇಗೆ! ಅವರು ಎಷ್ಟೋ ರೀತಿಯಾಗಿ ಕೆಲಸದ ಬಗ್ಗೆ ಹೆಣ್ಣುಗೂಲಿಗಳಿಗೆ ತಿಳಿಯ ಹೇಳಿದರೂ ಅವರಿಗೆ ಅರ್ಥವೇ ಆಗುತ್ತಿರಲಿಲ್ಲ; ಅವರು

ಮಾತನಾಡಿದ್ದೊಂದೂ ಜವಾದಾರರಿಗೆ ತಿಳಿಯುತ್ತಿರಲಿಲ್ಲ. ಇದರಿಂದ ಸೇನ್ ಗುಪ್ತರಿಗೆ ಒಳ್ಳೇ ಪೀಕಲಾಟಕ್ಕಿಟ್ಟುಕೊಂಡಿತು. ಸ್ಕೂಲ್‌ಮಾಸ್ತರರಾಗಿದ್ದ ಅವರಿಗೆ, "ಮೂರು ಹೆಣ್ಣಾಳುಗಳನ್ನು ಶಿಸ್ತಿನಲ್ಲಿಡುವದಕ್ಕಿಂತ, ನೂರು ಮಕ್ಕಳನ್ನು ಶಿಸ್ತಿನಲ್ಲಿಡುವುದು ಎಷ್ಟು ಸುಲಭ" ಎಂಬುದು ಆಗ ಅನುಭವಕ್ಕೆ ಬಂದಿತು! ಅವರು ಮಾತನಾಡಲು ಪ್ರಯತ್ನಪಟ್ಟ ಪ್ರತಿ ಸರತಿಯೂ, ಹೆಣ್ಣಾಳುಗಳು 'ಘೊಳ್' ಎಂದು ನಗುತ್ತಿದ್ದರು. ಕೆಲವು ಯುವತಿಯರಂತೂ, ಅವರನ್ನು ಹಾಸ್ಯ ಮಾಡಲೂ ಸಹ ಹಿಂಜರಿಯುಲಿಲ್ಲ!

ಇವರಿಂದಾಗಿ ಆಫೀಸರುಗಳ ಹಿಂದೆ ಹಿಂದೆ ತಿರುಗುವ ಕೆಲಸದಿಂದ ಸುಂದರಂನನ್ನು ಬಿಡಿಸಿ, ಆವಳು ತನ್ನ ಕೆಲಸದ ಮೇಲೆ ಸಾಕಷ್ಟು ಮುತು-ವರ್ಜಿ ವಹಿಸಲು ಆಸ್ಪದ ಕೊಡಲೇಬೇಕೆಂಬ ನಿರ್ಧಾರಕ್ಕೆ ಬರಬೇಕಾಯಿತು, ಸೇನ್ ಗುಪ್ತರು.

ಮಾರನೆಯ ದಿನ ಸೇನ್ ಗುಪ್ತರು; ಆಳುಗಳ ಸಂಗಡ, ತಕ್ಷಣವೇ ತನ್ನ ಕೆಲಸದ ಮೇಲೆ ಹಾಜರಾಗಬೇಕೆಂದು, ಸುಮಾರು ನಾಲ್ಕು ಸಲ ಹೇಳಿ ಕಳುಹಿಸ್ಸಿದರೂ, ಸುಂದರಂ ತನ್ನ ಮುಖ ತೋರಿಸಿದ್ದು ಕಾರ್ಖಾನೆ ಮುಚ್ಚಲು ಇನ್ನು ಹದಿನೈದು ನಿಮಿಷ ಇದೆ ಎನ್ನುವಾಗಲೇ! ಆಕೆಯನ್ನು ಕಂಡ ಕೂಡಲೆ, ರೊಚ್ಚಿಗೆದ್ದ ಸೇನ್ ಗುಪ್ತರು, 'ಇಲ್ಲಿಯವರೆಗೆ ಎಲ್ಲಿಗೆ ಹೋಗಿದ್ದಿ?' ಎಂದು ಸಿಟ್ಟಿನಿಂದ ಕೇಳಿದರು.

'ದೊಡ್ಡ ಧೊರೆಯ ಹತ್ತಿರಕ್ಕೆ' ಎಂದು ಧಿಟ್ಟತನದಿಂದ ಉತ್ತರ-ವನ್ನಿತ್ತಳು ಸುಂದರಂ.

'ಏಕೆ?'

'ದೊಡ್ಡ ಧೊರೆಗೆ ನನ್ನ ಅವಶ್ಯಕತೆಯಿತ್ತೆಂದು'

'ಏತಕ್ಕೋಸ್ಕರ?'

'ನನ್ನ ಕೆಲಸದ ವಿಷಯದಲ್ಲಿ ನನ್ನಸಂಗಡ ಮಾತನಾಡಬೇಕಾಗಿತ್ತು'

'ಇಲ್ಲಿ ನೋಡು ಸುಂದರಂ. ಇಂದು ನಾನು ನಿರ್ದಾಕ್ಷಿಣ್ಯವಾಗಿ ಹೇಳಿಬಿಡುತ್ತೇನೆ. ನಾನು ಈ ವಿಭಾಗಕ್ಕೆಲ್ಲಾ ಜವಾಬ್ದಾರಿಯಿದ್ದೇನೆ.

ದೊಡ್ಡ ಧೊರೆಗೆ, ನನ್ನ ವಿಭಾಗದಲ್ಲಿ ನಡೆಯುವ ಕೆಲಸದ ವಿಷಯವಲ್ಲಿ ಮಾತನಾಡಬೇಕಾದರೆ ನನ್ನನ್ನು ಕರೆಯಕಳುಹಿಸುತ್ತಾನೆ. ನೀನು ಹೋ-ಗುವ ಆವಶ್ಯಕತೆಯಿಲ್ಲ. ಇನ್ನು ಮುಂದೆ ನೀನು ನನ್ನ ಅಪ್ಪಣೆಯಿಲ್ಲದೆ, ನಿನ್ನ ಸ್ಥಳವನ್ನು ಬಿಟ್ಟು ಕದಲ ಕೂಡದು. ತಿಳಿಯಿತೆ? ನೀನು ಇಲ್ಲಿ ಇಲ್ಲದಿರುವುದರಿಂದ, ನಿನ್ನ ಕ್ರೈಕೆಳಗಿನ ಈ ಹೆಣ್ಣಾಳುಗಳು ಕೆಲಸವನ್ನೇ ಮಾಡುತ್ತಿಲ್ಲ."

ಆ ಕಾರ್ಖಾನೆಯಲ್ಲಿ ಮಿಸ್. ಸುಂದರಂ ಸಂಗಡ ಇಷ್ಟು ಸೊಕ್ಕಿನಿಂದ ಮಾತನಾಡಿದವರಲ್ಲಿ, ಸೇನ್ ಗುಪ್ತರೇ ಮೊದಲನೆಯವರು. ದುರಭಿಮಾನಿ-ಯಾದ ಸುಂದರಂಗೆ ಅಧಿಕಾರಿಗಳ ಮೇಲೆ ಇಷ್ಟು ದರ್ಪವಿರುವಾಗಲೂ ಸಹ, ಸೇನ್ ಗುಪ್ತರಂಥ ಸೊಟ್ಟ ಜವಾದಾರ್ ಸಾಹೇಬರಿಗೆ ಹೆದರು-ವಳೆ? ಅಲ್ಲ! ತನ್ನ ಕೆಲಸದ ಪರವಾಗಿ ತನ್ನನ್ನು ಪ್ರಶ್ನಿಸುವಷ್ಟು ಧೈರ್ಯ-ವಾದರೂ ಹೇಗೆ ಉಂಟಾಯಿತು ಈತನಿಗೆ?

ಸುಂದರಂ ಕೋಪದಿಂದ ಕಿಡಿಕಿಡಿಯಾಗಿ ಹೇಳಿದಳು "ಜವಾ ದಾರ್ ಸಾಹೇಬ್, ನಿಮ್ಮ ಕೆಲಸವನ್ನು ನೋಡಿಕೊಂಡು ಬೆಪ್ಪಗಿರುವುದು ಒಳಿತು." ತಾನು ತನ್ನ ಮೇಲಾಧಿಕಾರಿಯೊಡನೆ ಮಾತನಾಡುತ್ತಿರುವುದು ಗೊತ್ತಿತ್ತು ಸುಂದರಂಗೆ. 'ಅರೆ! ಈ ಕರಿಯ ಅಧಿಕಾರಿಗಳ ದರ್ಪ, ಬಿಳಿಯ ಅಧಿಕಾರಿಗಳ ಮುಂದೆ ಕರಗಿ ಹೋಗುತ್ತೆ' ಎಂಬುದೂ ಗೊತ್ತಿತ್ತು.

ಅಭಿಮಾನಿಯಾದ ಸೇನ್ ಗುಪ್ತರಿಗೆ, ತನ್ನ ಕೈಕೆಳಗಿನ ಸುಂದರಂನ ಉದ್ಧಟ ವರ್ತನೆಯನ್ನು ಸಹಿಸುವದಾಗಲಿಲ್ಲ. ತಾನು ಅವಳ ಮೇಲಾಧಿ-ಕಾರಿಯೆಂಬುದನ್ನೂ, ಅವಳ ನಡತೆಯ ಬಗ್ಗೆ ಒಂದು ರಿಪೋರ್ಟ್ ಬರೆದು ಅವಳನ್ನು ಕೆಲಸದಿಂದ ವಜಾ ಮಾಡಿಸುವಷ್ಟು ಅಧಿಕಾರ ತನ್ನಲ್ಲಿರುವು-ದೆಂಬುದನ್ನೂ ಆಕೆಗೆ ಸ್ಪಷ್ಟವಾಗಿ ತಿಳಿಯಪಡಿಸಿದರು ಸೇನ್ ಗುಪ್ತರು.

ಇದನ್ನು ಕೇಳಿ ಸುಂದರಂ ಗಹಗಹಿಸಿ ನಕ್ಕಿದ್ದೂ ಅಲ್ಲದೆ, 'ನಿನ್ನ ಕೈಯಲ್ಲಿ ಏನಾಗುವುದೋ ಮಾಡಿ ತೋರಿಸು ನೋಡುವ' ಎಂದು ಹೇಳಿ ಸೇನ್‌ಗುಪ್ತರನ್ನು ಮತ್ತಷ್ಟು ಸಿಟ್ಟಿಗೆಬ್ಬಿಸಿದಳು.

ಆದರೂ ಸಹ ಆದರ್ಶಜೀವಿ ಸೇನ್‌ಗುಪ್ತರು, ತಮ್ಮ ಸಿಟ್ಟನ್ನು ನುಂಗಿಕೊಂಡು "ಮಿಸ್. ಸುಂದರಂ, ಚಿಕ್ಕಮಗುವಿನಂತೆ ವರ್ತಿಸಬೇಡ. ನಾನು ಮನಸ್ಸು ಮಾಡಿದರೆ, ಈಗಲೇ ನಿನ್ನನ್ನು ಕೆಲಸದಿಂದ ವಜಾ ಮಾಡಿಸುವಷ್ಟು ಅಧಿಕಾರ ನನ್ನಲ್ಲಿದೆ. ಆದರೆ ಹಾಗೆ ಮಾಡಲು ನಾನು ಬಯಸುವುದಿಲ್ಲ. ನೋಡು, ಈಗ ಕಾಲ ಬಹಳ ಕೆಟ್ಟಿದೆ. ಎಲ್ಲೆಲ್ಲಿ ನೋಡಿದರೂ ಬಡತನ, ಕ್ಷಾಮ, ಬೇಗಾರಿಗಳು ತಾನೇ ತಾನಾಗಿ ಎದ್ದು ಕುಣಿಯುತ್ತಿವೆ. ಈಗಿನ ಕಾಲದಲ್ಲಿ ಇಂಥ ಕೆಲಸವನ್ನು ಕಳೆದುಕೊಳ್ಳುವುದು ಶುದ್ಧ ಮೂರ್ಖತನವಲ್ಲವೆ? ಗಂಡಸೇ ಒಬ್ಬ ಮನುಷ್ಯನ ಕಾಲಕೆಳಗೆ ಸಿಕ್ಕು, ಗುಲಾಮಗಿರಿಯಿಂದ ನರಳಿ ಸಾಯುವುದಕ್ಕಿಂತ, ನೀನು ಸ್ವತಂತ್ರವಾಗಿ ಜೀವಿಸುತ್ತಿರುವುದನ್ನು ನೋಡಿ, ನನಗೆ ಎಷ್ಟೋ ಸಂತೋಷ. ನಿನ್ನಂಥ ಆದರ್ಶ ಯುವತಿಯರಿಗೆ ಉತ್ತೇಜನ ಕೊಡಬೇಕೆಂಬುದೇ ನನ್ನ ಉದ್ದೇಶ...."

ಜಮಾದಾರ್ ಸಾಹೇಬರ ಹಿತೋಪದೇಶಗಳನ್ನು ಸಂಪೂರ್ಣವಾಗಿ ಕೇಳಲೂ ಇಷ್ಟಪಡದೆ ಮೂಗುಮುರಿದು ಹೊರಟು ಹೋದಳು ಸುಂದರಂ. ಸುತ್ತಲೂ ನೆರೆದಿದ್ದ ಹಣ್ಣಾಳುಗಳು ವಿಷಯವನ್ನು ಗ್ರಹಿಸಿ, 'ಘೊಳ್' ಎಂದು ನಗತೊಡಗಿದರು.

ಕರ್ತವ್ಯನಿಷ್ಠರಾದ ಜಮಾದಾರ್ ಸಾಹೇಬರು, ತಮ್ಮ ಸ್ವಾಭಿಮಾನವನ್ನು ಕಾಪಾಡಿಕೊಳ್ಳಲು, ಸುಂದರಂ ವಿರುದ್ಧ ರಿಪೋರ್ಟ್ ಒಂದನ್ನು ಬರೆಯಲೇ ಬೇಕಾಯಿತು.

ಇದಾದನಂತರ, ಒಂದು ವಾರದವರೆಗೂ, ಏನೂ ವಿಶೇಷ ಸಂಗತಿ ನಡೆಯಲಿಲ್ಲ. ಮಿಸ್. ಬಾಬು ಸುಂದರಂನನ್ನು ಕೆಲಸದಿಂದ ವಜಾಮಾಡಿದ ಆಜ್ಞೆಯನ್ನು ಪ್ರತಿ ನಿಮಿಷದಲ್ಲೂ ನಿರೀಕ್ಷಿಸುತ್ತಿದ್ದರು ಸೇನ್‌ಗುಪ್ತರು. ಆದರೆ ಸುಂದರಂ ಮಾತ್ರ, ಕಾರ್ಖಾನೆಗೆ ಬಂದು ಹೋಗುತ್ತಿದ್ದರೂ, ಕೆಲಸದ ಮೇಲೆ ಹಾಜರಾಗುವುದನ್ನೂ ನಿಲ್ಲಿಸಿಬಿಟ್ಟಿದ್ದುದಲ್ಲದೆ, ಹಾಜರಿಯನ್ನು ಕೊಡುವುದಕ್ಕೂ ಸಹ ಬರುತ್ತಿರಲಿಲ್ಲ.

ಒಂದು ಮಧ್ಯಾಹ್ನ ಸುಮಾರು ಒಂದೂವರೆ ಘಂಟೆ ಹೊತ್ತಿನಲ್ಲಿ ಊಟದ ಬಿಡುವಿದ್ದುದರಿಂದ, ಪ್ರತಿಯೊಬ್ಬರೂ ತಮ್ಮ ತಮ್ಮ ಭೋಜನ-

ವನ್ನು ತೀರಿಸಿಕೊಳ್ಳಲು ಹೊರಟು ಹೋಗಿದ್ದರು. ಆದರೆ ಸೇನ್ ಗುಪ್ತ-ರೊಬ್ಬರು ಮಾತ್ರ, ಫೈಲುಗಳ ರಾಶಿಯಲ್ಲಿ ತಮ್ಮ ತಲೆಯನ್ನು ಹುಗಿದು ಕೊಂಡು, ಏನೋ ಬರೆಯುತ್ತಾ ಕುಳಿತಿದ್ದರು. ಮಿಸ್ ಸುಂದರಂ ರೂಮಿನೊಳಕ್ಕೆ ಬಂದು, ತಮ್ಮ ಎದುರಿಗೆ ನಿಂತು ಎಷ್ಟು ಹೊತ್ತಾದರೂ, ಅವರಿಗೆ ತಿಳಿದುಬರಲಿಲ್ಲ. ಅಷ್ಟು ಮುಳುಗಿದ್ದರು ಅವರು ತಮ್ಮ ಕೆಲಸದಲ್ಲಿ. 'ಅಯ್ಯೋ! ನನ್ನನ್ನು ಕಾಪಾಡಿ; ನನ್ನನ್ನು ಕಾಪಾಡಿ' ಎಂದು ಮಿಸ್. ಬಾಬು ಸುಂದರಂ ಕೂಗಿಕೊಳ್ಳತೊಡಗಿದಾಗಲೇ ಅವರು ದಿಗ್ಭ್ರಮೆಯಿಂದ ಎದ್ದುನಿಂತರು. ಎದುರಿಗೆ ಸುಂದರಂ ನಿಂತು ಕೊಂಡು ಕರ್ಕಶಧ್ವನಿಯಲ್ಲಿ ಬೊಬ್ಬೆ ಹೊಡೆಯುತ್ತಿದ್ದಾಳೆ! ಎಲ್ಲ ಕಡೆ ಯಿಂದಲೂ ಜನರು ಆ ಸ್ಥಳಕ್ಕೆ ಧಾವಿಸಿ ಧಾವಿಸಿ ಬರುತ್ತಿದ್ದಾರೆ. ದೊಡ್ಡ ಧೊರೆಯಿಂದ ಹಿಡಿದು ಅನೇಕ ಸಣ್ಣಪುಟ್ಟ ಆಫೀಸರುಗಳೂ ಬಂದು ನಿಂತಿದ್ದಾರೆ. ತನ್ನ ಶೀಲವನ್ನು ಕೆಡಿಸಲು ಸೇನ್‌ಗುಪ್ತರು ಹೇಗೆ ಪ್ರಯತ್ನಿ-ಸಿದರೆಂಬುದನ್ನು, ಸುಂದರಂ ಅಳುತ್ತಳುತ್ತಾ, ನೆರೆದಿದ್ದ ಜನಸಮೂಹದ ಮುಂದೆ ಬಣ್ಣಿಸುತ್ತಿದ್ದಾಳೆ.

ಮೇಲಿನ ವಿಷಯ ನಡೆದು ಎರಡು ತಿಂಗಳುಗಳಾಗಲೇ ಕಳೆದು ಹೋಗಿತ್ತು. 'ಜಮಾದಾರ್ ಸಾಹೇಬ್ ಸೇನ್‌ಗುಪ್ತರೆಂಬುವರಿಗೆ ಒಂದು ಕಾರ್ಖಾನೆಯ ಹೆಣ್ಣು ಕೆಲಸಗಾರಳೊಬ್ಬಳ ಶೀಲವನ್ನು ಕೆಡಿಸಲು ಪ್ರಯ-ತ್ನಿಸಿದ ತಪ್ಪಿಗಾಗಿ ಕೋರ್ಟ್ ಮಾರ್ಷಲ್ ಮುಖಾಂತರ, ಏಳು ವರ್ಷ ಸಶ್ರಮ ಶಿಕ್ಷೆ ವಿಧಿಸಲಾಯಿತು' ಎಂಬ ಸುದ್ದಿಯನ್ನು, ಎಲ್ಲ ಯೋಧರಿಗೂ ತಿಳಿಯಲೆಂದು ಪ್ರಸಿದ್ಧಿಸಲಾಯಿತು.

(ಸೆಪ್ಟೆಂಬರ್ ೧೯೪೬ "ಸ್ವತಂತ್ರ" ಬೆಂಗಳೂರು)



# ಎರಡು ಕೊಲೆಗಳು

"ನಮಸ್ಕಾರ ಶಾಮು, ಯಾವಾಗ ಬಂದೆ?"

"ನಮಸ್ಕಾರ; ನಿನ್ನೆ ರಾತ್ರಿ ಮೂರು ಗಂಟೆ ರೈಲಿನಲ್ಲಿ?"

"ರಜ ಹೇಗೆ ಕಳೆಯಿತು?"

"_______"

"ಏಕೆ ಸಪ್ಪಗಿದ್ದೀಯಾ? ಮನೆಯಲ್ಲಿ ಎಲ್ಲರೂ ಕ್ಷೇಮ ತಾನೆ."

"ಏನು ಬಂತಪ್ಪ ಕ್ಷೇಮ. ನನಗೇಕೋ ಜೀವನವೇ ಬೇಸರವಾಗಿದೆ.'

"ಏಕೆ? ಏನಾಯಿತು?....ಓಹೋ.... ಗೊತ್ತಾಯಿತು.... ತಬ್ಬಲಿ. ಯಾವ ತಂಗಿ ತಮ್ಮಂದಿರನ್ನು ಬಿಟ್ಟು ಬಂದಿರುವೆನೆಂದು ಹೀಗೆ ಗೋಳಾಡು. ತ್ತಿರುವಿ. 'ಸಿಪಾಯಿ' ಯಾದವನಿಗೆ ಮಮತೆಯೂ ಒಂದು ನಿರ್ಬಲತೆಯೇ ಸರಿ. ನಿನ್ನ ಮನಸ್ಸನ್ನು ಬೇರೆ ಕಡೆಗೆ ತಿರುಗಿಸಲು ಪ್ರಯತ್ನಮಾಡು. ಅಂದರೆ ಎಲ್ಲವೂ ತಾನೇ ಸರಿಹೋಗುವುದು."

"ಹಾಗಲ್ಲ ಕೃಷ್ಣ. ನಿನಗೆ ವಿಷಯ ಗೊತ್ತಿಲ್ಲ, ನನ್ನ ಮನಸ್ಸಿನ ಮೇಲೆ ಆಗಿರುವ ಪರಿಣಾಮವು ನನ್ನನ್ನು ಆಮರಣಾಂತರ ದುಃಖಿಯನ್ನಾಗಿ ಮಾಡಿದೆ."

"ಸರಿಸರಿ. ದುಃಖಿಯಾದವರೆಲ್ಲರೂ ಹೀಗೆಯೇ ಹೇಳುವುದು. ಆದರೆ ಕಾಲಗತಿಯಲ್ಲಿ ಎಲ್ಲವನ್ನೂ ಮರೆತು ಬಿಡುವರು. ಅದಿರಲಿ, ನಿನ್ನನ್ನು ಯಾವ ದುಃಖವು ಬಾಧಿಸುತ್ತಿರುವುದು? ಅಂದರೆ ಅದರ ಪರಿಹಾರಕ್ಕೆ ಯಾವುದಾದರೂ ಉಪಾಯವನ್ನು ಯೋಚಿಸುವ"

"ಯೋಚಿಸುವುದೇನು? ಮನುಷ್ಯನ ಕೈ ಮೀರಿ ಹೋಗಿದೆ. ಬಹುಶಃ ಬ್ರಹ್ಮನೇ ಸ್ವತಃ ಇಳಿದು ಬಂದರೂ, ಆತನಿಗೂ ಸಹ ಏನು ಮಾಡಲೂ ಶಕ್ಯವಿಲ್ಲ.

"ಅದೆಂತಹ ಪ್ರಸಂಗವಯ್ಯಾ"

"ನನಗೆ ನನ್ನ ಸ್ವಂತ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದ ತಂಗಿ ತಮ್ಮಂದಿರು ಇರುವರಷ್ಟೇ. 'ಪಾಪ! ತಬ್ಬಲಿ ಮಕ್ಕಳು' ಎಂದು ನಾನು ಅವರನ್ನು ಎಷ್ಟು ಪ್ರೀತಿಸುತ್ತೇನೆಂದು ನಿನಗೆ ತಿಳಿದೇ ಇದೆ. ಇರಾಕಿನಲ್ಲಿದ್ದಾಗ ಅವರಿಗಾಗಿ ನಾನು ಎಷ್ಟು ತಳಮಳಗೊಳ್ಳುತ್ತಿದ್ದೆನೆಂಬುದೂ ನಿನಗೆ ಗೊತ್ತಿದೆ. ತಂದೆಯ ಮೇಲಿನ ಮನಸ್ತಾಪದಿಂದ ಆರು ವರ್ಷಗಳಿಂದ ಅವರನ್ನು ನೋಡಲು ನನಗೆ ಅವಕಾಶವಿರಲಿಲ್ಲ. ಮೊನ್ನೆ ಹಿಂದುಸ್ತಾನಕ್ಕೆ ಬಂದ ಮೇಲೆ ಅವರನ್ನು ನೋಡ ಹೋಗಿದ್ದೆನಷ್ಟೆ. ಅವರ ಸ್ಥಿತಿಯನ್ನು ನೋಡಿ ನನಗೆ ಎದೆ ಕದಡಿಹೋಯಿತು. ಕೆಲವು ಜನರು ಮನೆಯಲ್ಲೇ ಕುಳಿತು, ಆರಾಮದಿಂದ ತಿಂದುಂಡು, ಬಣ್ಣಿಸಲಸಾಧ್ಯವಾದ ಪಾಪಕೃತ್ಯಗಳನ್ನು ಮಾಡುತ್ತಿದ್ದರೂ ಅವರ ಮರ್ಯಾದೆಗೆ, ಸ್ಥಾನಕ್ಕೆ, ಲೇಶವಾದರೂ ಕುಂದುಂಟಾಗುವದಿಲ್ಲ. ಪಾಪಿಗಳನ್ನು ಶಿಕ್ಷಿಸಬೇಕೆಂದು ಎಲ್ಲ ಶಾಸ್ತ್ರಗಳೂ, ಸರ್ಕಾರಗಳೂ, ಘೋಷಿಸಿವೆಯೆಂದು ಕೇಳಿದ್ದೇನೆ. ಆದರೆ ನಮ್ಮ ಜನರು ಎಂತೆಂಥ ಪಾಪಕೃತ್ಯ ಮಾಡುತ್ತಿದ್ದರೂ ಅವರನ್ನು ಶಿಕ್ಷಿಸುವುದು ಒತ್ತಟ್ಟಿಗಿರಲಿ, ಅವರು ಪಾಪಿಗಳೆಂದೂ ಹೇಳಲ್ಪಡುವುದಿಲ್ಲ. ತಪ್ಪಿತಸ್ಥರಿಗೆ ಶಿಕ್ಷೆಯಿಲ್ಲದ ಮೇಲೆ ಅವರು ಬಾರಿಬಾರಿಗೂ ತಪ್ಪು ಮಾಡುವದಲ್ಲದೆ, ಮಿಕ್ಕುಳಿದವರಿಗೂ ತಪ್ಪು ಮಾಡಲು ಉತ್ತೇಜನ ಕೊಟ್ಟಂತಾಗುವದಿಲ್ಲವೆ. ಮೇಲಾಗಿ ನನಗೆ ಅನ್ಯಾಯ ಮಾಡಿದ ಪಾಪಿಗೆ ಶಿಕ್ಷೆಯಾಗದೆ ಹೋದರೆ, ನನಗೆ ಸಾಯುವವರೆಗೂ ಮನಶ್ಶಾಂತಿ ದೊರಕದು? ನಾನೇನು ಮಾಡಲಿ? ಯಾರಲ್ಲಿಗೆ ಹೋಗಲಿ??"

"ಏಕೆ ಇಷ್ಟು ತಳಮಳಗೊಳ್ಳುತ್ತಿದ್ದೀಯೆ? ನಿನಗೇನಾಗಿದೆ? ಮೊನ್ನೆ ಮೊನ್ನೆಯವರೆಗೂ ನಿನ್ನಷ್ಟು ಸುಖಿ ಇಲ್ಲವೆಂದು ಹೇಳುತ್ತಿರಲಿಲ್ಲವೆ?"

"ನನ್ನ ಹಿರಿಯ ತಂಗಿ ಇದ್ದಳಲ್ಲಾ, ಲಲಿತ, ಅವಳು ಖೂನಿ ಮಾಡಲ್ಪಟ್ಟಳು"

"ಏನು! ಖೂನಿಯೇ! ಯಾರು ಮಾಡಿದವರು?"

"ನಮಪ್ಪ"

"ಏನು ನಿಮ್ಮಪ್ಪನೇ ಮಗಳನ್ನು ಕೊಂದನೆ!.....ಅಯ್ಯೋ ಪಾಪವೆ.. ....ಏನು ಶಿಕ್ಷೆಯಾಯಿತು?"

"ಶಿಕ್ಷೆಯೆಲ್ಲಿಂದ ಬಂತು? ಶಿಕ್ಷೆಯಾಗಿದ್ದ ಪಕ್ಷದಲ್ಲಿ ನನಗೇತರ ಚಿಂತೆ. ಹಾಗಿದ್ದ ಪಕ್ಷದಲ್ಲಿ, 'ಸಿಪಾಯಿ' ಯಾದ ನಾನು, ನನ್ನ ತಂಗಿಯೊಬ್ಬಳು ಬಂಗಾಲದ ಬರದಲ್ಲೋ ಅಥವಾ ಯುದ್ಧದಿಂದುಂಟಾದ ಅನಾಹುತಗಳಿಂದಲೋ ಸತ್ತು ಹೋದಳೆಂದು ತಿಳಿಯುತ್ತಿದ್ದೆ. ಆದರೆ, ಖೂನಿಮಾಡಿದವನನ್ನು ಯಾರೂ ಶಿಕ್ಷಿಸದೆ ಆತನು ತಿರುಗಿ ಸಮಾಜದಲ್ಲಿ ಸುಲಲಿತವಾಗಿ ಜೀವನವನ್ನು ಸಾಗಿಸಲು ಯಾವ ಪ್ರತಿಬಂಧಕವಿಲ್ಲದೆ, ಸಮಾಜದಲ್ಲಿ ಒಬ್ಬ ಗೌರವಸ್ಥನಾಗಿ ಇರುವುದರಿಂದಲ್ಲವೇ ನನಗೆ ಹೊಟ್ಟೆ ಉರಿದು ಹೋಗುತ್ತಿರುವುದು."

"ಏನು ಖೂನಿ ಮಾಡಿ ತಪ್ಪಿಸಿಕೊಳ್ಳುವರೂ ಉಂಟೆ?"

"ಅಹುದು....ನಮ್ಮಲ್ಲಿ ಉಂಟು"

"ನಿಮ್ಮಪ್ಪನು ಮಗಳನ್ನು ಕೊಂದ ಕಾರಣವೇನೆಂದು ಸ್ವಲ್ಪ ವಿಶದವಾಗಿ ತಿಳಿಸಬಾರದೆ."

"ನಮ್ಮಪ್ಪನೊಬ್ಬ ಸ್ವಾರ್ಥಿ. ಬಡವನೇನೋ ನಿಜ. ಆದರೆ ಅವನು ಮನಸ್ಸು ಮಾಡಿದ್ದರೆ ಸುಖವಾಗಿರಬಹುದಿತ್ತು. 'ಸ್ವಾರ್ಥಬುದ್ಧಿ' ಯಿಂದಲೇ ಆತನು, ತನ್ನ ಸುಲಲಿತವಾದ ಜೀವನವನ್ನೇ ಅಲ್ಲ, ತನ್ನ ಮಕ್ಕಳೆಲ್ಲರ ಜೀವನವನ್ನೂ ಹಾಳು ಮಾಡಿದ.

"ಆಗ ನಮ್ಮಪ್ಪನಿಗೆ ೪೨ ವಯಸ್ಸಿರಬಹುದು. ಚಾಕರಿಯಿಂದ ಬರುತ್ತಿದ್ದ ನಲವತ್ತು ರೂಪಾಯಿಗಳ ಸಂಬಳವು, ನಮ್ಮೆಲ್ಲರ ಜೀವನಾಧಾರ. ನಮ್ಮ ತಾಯಿ, ಓದು ಬರೆಹ ಅಷ್ಟಷ್ಟೇ ಆಗಿದ್ದರೂ, ಬುದ್ಧಿವಂತೆ. ಇಷ್ಟೇ ಸ್ವಲ್ಪ ಉತ್ಪನ್ನದ ಬಲದಿಂದ, ಆಕೆಯು ತನ್ನ ಗಂಡ ಮತ್ತು ಎಂಟು ಮಕ್ಕಳ ಸಂಸಾರವನ್ನು ಅಸಾಧಾರಣವಾದ ಸಾರಥ್ಯದಿಂದ, ತಗ್ಗು ದಿನ್ನೆಗಳೆನ್ನದೆ, ಸಲೀಸಾಗಿ ನಡೆಸುತ್ತಿದ್ದಳು. ಆದರೆ ನಮ್ಮ ದುರಾದೃಷ್ಟವೆನ್ನುವ, ಅಥವಾ ದೇವರಿಗೆ ಕಣ್ಣಿಲ್ಲವೆನ್ನುವ, ಆಕೆಯು ಅಕಾಲ ಮರಣಕ್ಕೆ ತುತ್ತಾದಳು. ಆಕೆ ಸಾಯುವಾಗ್ಯೆ, ತಾನು ಕೂಡಿಟ್ಟಿದ್ದ, ೮೦೦ ರೂಗಳಷ್ಟು ಹಣವನ್ನೂ, ಮತ್ತು

ಎರಡು ಸಾವಿರಗಳಷ್ಟು ಬೆಲೆ ಬಾಳುವ ಒಡವೆಗಳನ್ನೂ ತನ್ನ ಎಂಟು ಮಕ್ಕಳನ್ನೂ ತನ್ನ ಗಂಡನ ಕೈಯಲ್ಲಿರಿಸಿ ಕಣ್ಣಿನಲ್ಲಿ ನೀರು ಸುರಿಸುತ್ತಾ ಕಡೆಯುಸಿರನ್ನೆಳೆದಳು. ಅದಾದ ಕೆಲವು ದಿನಗಳಲ್ಲೇ, ನಮ್ಮಪ್ಪನಿಗೆ ತಾರುಣ್ಯವು ಉಕ್ಕೇರಿ ಬಂದಿತು. ಆತನ ತಲೆಯಲ್ಲಿ ತಿರುಗಿ ಮದುವೆಯಾಗುವ ವಿಚಾರವು ಉದ್ಭವಿಸಿತು. ತಾನು ಮತ್ತೊಮ್ಮೆ ಮದುವೆಯಾದರೆ ನಮ್ಮೆಲ್ಲರ ಗತಿಯೇನು, ಈಗಾಗಲೇ ಸಂಸಾರದ ಖರ್ಚನ್ನು ನಿರ್ವಹಿಸುವುದು ಕಷ್ಟಸಾಧ್ಯವಾಗಿರುವಾಗ, ಮದುವೆಯಾಗುವುದರಿಂದ ಉಂಟಾಗುವ ಖರ್ಚಿಗೂ, ಹೊಸ ಹೆಂಡತಿಯನ್ನೂ ಮತ್ತು ಅವಳ ಮಕ್ಕಳನ್ನೂ ಸಾಕಿ ಸಲಹುವುದಕ್ಕೆ ಎಲ್ಲಿಂದ ಹಣ ತರಬೇಕು ಎಂಬ ಯಾವ ವಿಷಯಗಳನ್ನೂ ಗಣನೆಗೆ ತಾರದೆ, ನಮ್ಮ ತಾಯಿಯು ಬೆವರು ಸುರಿಸಿ ಕಷ್ಟಪಟ್ಟು ಸಂಗ್ರಹಿಸಿದ ಆಸ್ತಿಯಿಂದ ಒಂದು ಹೆಂಡತಿಯನ್ನು, ಶಾಸ್ತ್ರದ ಅನುಮತಿ-ಯಿಂದಲೇ, ಕೊಂಡು ತಂದನು. ಪಾಪ! ಬಂದವಳದೇನೂ ತಪ್ಪಿಲ್ಲ. ಅವಳೂ ಸಮಾಜದ ದುರಾಚಾರಕ್ಕೆ ಬಲಿಯಾದ ಮುಗ್ಧೆಯರಲ್ಲಿ ಒಬ್ಬಳು. ಹುಡಿಗಿಯ ಜೊತೆಯಲ್ಲಿ ಅವಳ ತಾಯಿಯೂ ಸಹ ನಮ್ಮಪ್ಪನ ಮನೆಯನ್ನು ಸೇರಿದಳು. ತಾಯಿ ಬುದ್ಧಿವಂತೆ, ಲೋಕವನ್ನು ಕಂಡವಳು. ಮದುವೆಗೆ ಮುಂಚೆ ರಾಯರಿಗೆ ಎಂಟು ಮಕ್ಕಳಿವೆಯೆಂದು ತಿಳಿದಕೂಡಲೆ, ರಾಯರು ತಮ್ಮಲ್ಲಿದ್ದ ಒಡವೆಗಳಷ್ಟನ್ನೂ ತಮ್ಮ ಹೊಸಹೆಂಡತಿಗೆ ಬಿಟ್ಟು ಕೊಡಬೇಕೆಂದೂ, ಅವುಗಳ ಮೇಲೆ ಆತನ ಮೊದಲನೆಯ ಹೆಂಡತಿಯ ಮಕ್ಕಳಿಗೆ ಯಾವ ಅಧಿಕಾರವೂ ಇರಕೂಡದೆಂದೂ, ಕರಾರು ಹಾಕಿ, ಒಡವೆಗಳನ್ನು ತನ್ನ ವಶಕ್ಕೆ ತೆಗೆದುಕೊಂಡಿದ್ದಳು. ನಮ್ಮಪ್ಪನಿಗಾದರೋ ಬುದ್ಧಿಯಿತ್ತೆ? ಹೊಸ ಹೆಂಡತಿಯನ್ನು ಕೊಳ್ಳುವ ಹೊಸ ಹುರುಪಿನಲ್ಲಿ, ತಬ್ಬಲಿಯಾದ ನಮ್ಮೆಲ್ಲ-ರನ್ನೂ ಮರೆತುಬಿಟ್ಟಿದ್ದ.

ಆನಂತರ ನಡೆಯುವುದು ಲೋಕವೆ ಕಂಡಿದೆ. ಮನೆಯಲ್ಲಿರುವ ವಸ್ತುಗಳೆಲ್ಲವೂ ಅವರಿಗಾಯಿತು; ಮನೆಯ ಅಧಿಕಾರಿಗಳೂ ಅವರೇ ಆದರು. ನಾವು ಮಾತ್ರ ಎರಡು ಹೊತ್ತು ಕೂಳಿಗಾಗಿ ಕಾದು ಬಿದ್ದಿರುವ ನಾಯಿ-ಯಂತೆ ಯಾರಿಗೂ ಬೇಡವಾದ ವಸ್ತುವಾದೆವು. ಎಲ್ಲರೂ ನಮ್ಮನ್ನು

ಬಯ್ಯುವವರೇ, ಹೀಯಾಳಿಸುವವರೇ. ಮಾತನಾಡಿದರೆ ತಪ್ಪು, ನಿಂತರೆ, ಕುಳಿತರೆ ತಪ್ಪು ಏನುಮಾಡಿದರೂ ತಪ್ಪೆ. ಮೊದಲೇ ನಮಪ್ಪಕ್ರೂರಿ, ದುಷ್ಟ ಹೆಂಡತಿಯ ಮತ್ತು ಅತ್ತೆಯ ಮಾತನ್ನು ಕೇಳಿಕೊಂಡು ನಮ್ಮನ್ನು ಹಿಂಸಿಸ ತೊಡಗಿದ. ನಾವು ಏನು ಮಾಡಬೇಕು? ಏನು ಮಾಡಲು ಸಾಧ್ಯ?ಮನೆಯೆ ಜೈಲು. ಮನೆಬಿಟ್ಟು ಹೊರಗೆ ಬಂದರೆ ಈ ದೊಡ್ಡ ದೇಶದಲ್ಲಿ ನಮ್ಮನ್ನು ಕೇಳುವರಾರು? ಮುಂದುಗಾಣದೆ, ಎಲ್ಲವನ್ನೂ ಸಹಿಸಿಕೊಂಡು ಯಾರಿಗೂ ತಿಳಿಯದ ಹಾಗೆ ಕಣ್ಣೀರಿನ ಕಾಲುವೆಯಲ್ಲಿ ದುಃಖವನ್ನು ಶಮನಮಾಡಿ ಕೊಳ್ಳುತ್ತಿದ್ದೆವು.

ಮನೆಯಲ್ಲಿ ನಾನೇ ಹಿರಿಯ, ಧೈರ್ಯವಂತ. ಒಂದು ದಿನ ಧೈರ್ಯ-ಮಾಡಿ ಮನೆಯನ್ನು ಬಿಟ್ಟೆ. ಆಗ ನನಗೆ ಹಿಂದುಳಿದ ನನ್ನ ತಂಗಿ, ತಮ್ಮಂದಿರ ಕ್ಷೇಮದ ಬಗ್ಗೆ ಹೊಳೆಯಲಿಲ್ಲ. ನನಗೆ ಆಗ ಹದಿನಾರು,ಹದಿನೇಳು ವರ್ಷಗಳಿರಬಹುದು. ಮನೆ ಬಿಟ್ಟಾಗ ನನಗಿದ್ದ ಒಂದೇ ಒಂದು ಸಂಕಲ್ಪ-ವೆಂದರೆ, ನನ್ನ ಕಾಲ ಮೇಲೆ ನಿಂತುಕೊಂಡು,ನನ್ನ ತಂಗಿ ತಮ್ಮಂದಿರನ್ನು ನನ್ನ ಮನೆಯಲ್ಲಿಟ್ಟುಕೊಂಡು, ಅವರನ್ನು ಮುಂದಕ್ಕೆ ತರುವುದು. ದಾನಿಗಳೂ, ಧರ್ಮಶೀಲರೂ, ತುಂಬಿರುವ ಈ ಅಖಂಡ ಭಾರತದಲ್ಲಿ ನಾವು ಬದುಕನ್ನು ಕಾಣಬಹುದೆ! ನಾಲ್ಕು ವರ್ಷಗಳು ಬಹಳ ಕಷ್ಟದಿಂದ ಉರುಳಿ ಹೋದವು. ನಾನು ನಮ್ಮಪ್ಪನ ಮನೆಯನ್ನು ಬಿಟ್ಟದ್ದೇ ಮಹಾಪರಾಧವೆಂದು ಪಶ್ಚಾತ್ತಾಪ ಪಡತೊಡಗಿದೆ. ಆದರೆ ದೇವರು ದಯಾಳು; ಯುದ್ಧವು ಪ್ರಾರಂಭವಾಯಿತು. ನನಗೆ ಸುಸಂಧಿಯು ದೊರಕಿತು.

ನನಗೆ ಬರುತ್ತಿದ್ದ ಅಲ್ಪ ಪಗಾರದಲ್ಲೇ ಆದಷ್ಟು ಹಣವನ್ನು ಶೇಖರಿಸ ತೊಡಗಿದೆ. ಎರಡು ವರ್ಷಗಳ ನಂತರ ನಾನು'ಇರಾಕ್' ನಿಂದ ಮನೆಗೊಂದು ಪತ್ರಬರೆದು, ನನ್ನ ತಂಗಿ ತಮ್ಮಂದಿರ ಕ್ಷೇಮಕ್ಕೆ ವಿಚಾರಿಸಿದೆ. "ದೊಡ್ಡ ತಂಗಿಯು ಮದುವೆಯಾಗಿ ಗಂಡನ ಮನೆಗೆ ಹೋಗಿರುವಳೆಂದೂ, ಉಳಿದವರು ಸುಖವಾಗಿ ಓದಿಕೊಂಡು ಇರುವರೆಂದೂ, ಯುದ್ಧದಿಂದಾಗಿ ಸಾಮಾನುಗಳು ತುಟ್ಟಿಯಾಗಿ, ಬಹಳ ಕಷ್ಟವಾಗಿ-ರುವದೆಂದೂ,ಅದಕ್ಕಾಗಿ ಹಣ ಕಳುಹಿಸಬೇಕೆಂದೂ ಉತ್ತರ ಬಂದಿತು. ನನ್ನ

ತಂಗಿ ತಮ್ಮಂದಿರು ಎಷ್ಟು ಸುಖವಾಗಿರ ಬಹುದೆಂದು ಊಹಿಸಿದೆ. ಆದರೆ ಒಂದು ಸಂತೋಷದ ಸಂಗತಿ; ಒಬ್ಬಳಾದರೂ ಹಿಂಸೆಯಿಂದ ಪಾರಾದಳಲ್ಲ !!

ಹಣವನ್ನೇನೋ ಕಳುಹಿಸಲು ಮೊದಲಿಟ್ಟೆ. ಸುಮಾರು ಮೂರುಸಾವಿರ ರೂಪಾಯಿಗಳವರೆಗೂ ಕಳುಹಿಸಿದೆ. ಏಕೆ? ನನ್ನ ತಂಗಿ ತಮ್ಮಂದಿರೊಬ್ಬರಿಗೇ ಅಲ್ಲ, ಎಲ್ಲರೂ ಸುಖವಾಗಿರಲೆಂದು. ನಾನು ದೊಡ್ಡ ಮನಸು ಮಾಡಿದೆ. ಹಣ ಕಳುಹಿಸಲುಶುರುಮಾಡಿದಮೇಲೆ ಕಾಗದಗಳುಬರಲುಪ್ರಾರಂಭವಾದವು ಏನೇನೋ ವಿಷಯಗಳು ತಿಳಿಯ ಬಂದವು. ನನ್ನ ತಮ್ಮನ ವ್ಯಾಸಂಗದ ಖರ್ಚು....ನಮ್ಮ ಚಿಕ್ಕಮ್ಮನ ಮೂರನೆಯ ಬಾಣಂತಿತನ-ನನ್ನ ತಂಗಿಯರಿಗೆ ಬೇಕಾಗುವ ಲಂಗಸೀರೆಗಳು....ಆದರೆ ಒಂದು ಕಾಗದದಲ್ಲಾದರೂ ಮದುವೆ ಮಾಡಿ ಕೊಟ್ಟಿರುವ ತಂಗಿಯ ವಿಷಯವಾಗಿ, ಒಂದು ವಾಕ್ಯವೂ ಇಲ್ಲ! ಎಷ್ಟೋ ಕಾಗದಗಳನ್ನು ಹಾಕಿ, ಅವಳ ವಿಳಾಸವನ್ನು ಕೊಡಬೇಕೆಂದು ಕೋರಿದೆ—ಆದರೆ ಬಂದವುಗಳೆಲ್ಲವೂ ಸೆನ್‌ಸಾರ್ ಆದದ್ದೇ. ಆಕೆಯ ವಿಷಯವಾಗಿ ಏನೂ ತಿಳಿಯಬರಲಿಲ್ಲ. ನನ್ನ ತಂಗಿಯ ಕ್ಷೇಮದ ಬಗ್ಗೆ ಬಹಳ ಚಿಂತೆಯಾಯಿತು. ಮುಂದುಗಾಣದೆ ತೆಪ್ಪಗಿದ್ದೆ.

ಮೊನ್ನೆ ಹಿಂದೂಸ್ಥಾನಕ್ಕೆ ಬಂದ ಕ್ಷಣ, ಆದಷ್ಟು ಬೇಗ ರಜೆಯನ್ನು ಪಡೆಯಲು ಶಕ್ತಿಮೀರಿ ಹೋರಾಡಿ, ರಜಸಿಕ್ಕಿದೊಡನೆ ಮನೆಯ ಕಡೆ ಧಾವಿಸಿದೆನಷ್ಟೆ. ಮನೆಯನ್ನು ಹೊಕ್ಕ ಕೂಡಲೆ, ನನ್ನ ತಂಗಿಯ ವಿಷಯವಾಗಿ ಪ್ರಶ್ನಿಸಿದೆ. ತಂದೆಯಿರಲಿಲ್ಲ. ನಮ್ಮಪ್ಪನ ಅತ್ತೆಯೇ ಉತ್ತರಕೊಟ್ಟಳು.

'ಇನ್ನೆಲ್ಲಪ್ಪ ಆಕೆ! ಈಗ್ಯೆ ಸತ್ತು ನಾಲ್ಕುವರೆ ತಿಂಗಳಾಯಿತು'

'ನನ್ನ ತಂಗಿ ಸತ್ತಳೆ? ಏಕೆ? ಹೇಗೆ?'

'ಭಾವಿಗೆ ಬಿದ್ದು'

"ಭಾವಿಗೆ!! ಯಾರು ತಳ್ಳಿದವರು? ನನಗೆ ಹೇಳಿ; ಕೊಂದು ಬಿಡುತ್ತೇನೆ. ನಾನು ಸಿಪಾಯಿ; ಯಾರಿಗೂ ಹೆದರುವವನಲ್ಲ'' ಎಂದು ಹುಚ್ಚಾಪಟ್ಟೆ ಕೂಗಾಡಲು ಪ್ರಾರಂಭಿಸಿದೆ. ನಮ್ಮಪ್ಪನ ಅತ್ತೆ ಹೆದರಿ ಒಳಗೆ ಜರಿದಳು.

ನಮ್ಮಪ್ಪ ಕಚೇರಿಯಿಂದ ಬಂದ; ಎದುರಿಗೆ ನಿಂತಿರುವವನನ್ನು ನೋಡಿದ. ಮಗನೇನೋ ಹೌದು. ಆದರೆ ಈಗ ಮಾತ್ರ ಮಾತನಾಡಿಸುವ

ಧೈರ್ಯವಿಲ್ಲ. ದಷ್ಟಪುಷ್ಟನಾಗಿ ಬೆಳೆದ ಮಗ; ಹಣದ ಬಲವೂ ಸಾಕಷ್ಟಿದೆ. ತಲೆಯೆತ್ತಲೂ ಧೈರ್ಯವಾಗಲಿಲ್ಲ! ನಾನೇ ಗದರಿಸುವ ಧ್ವನಿಯಲ್ಲಿ ಮಾತ-ನಾಡಿಸಿದೆ.

'ಲಲಿತ ಎಲ್ಲಿ ?'

'ಸತ್ತು ಹೋದಳು'

'ಹೇಗೆ ?'

'ಭಾವಿಗೆ ಬಿದ್ದು'

"ಏಕೆ"

"ಅತ್ತೆಯ ಮನೆಯಲ್ಲಿ ಕೊಡುವ ಕಾಟವನ್ನು ತಡೆಯಲಾರದೆ"

"ಎಲ್ಲಿದೆ ಅತ್ತೆಯ ಮನೆ ?"

"ಬಿಜಾಪುರದ ಹತ್ತಿರ- ಒಂದು ಹಳ್ಳಿ?"

"ಅಲ್ಲಿಗೇಕೆ ಮದುವೆ ಮಾಡಿಕೊಟ್ಟದ್ದು?"

ಇಷ್ಟರಲ್ಲಿ ನಮ್ಮಪ್ಪನ ಅತ್ತೆ, ಬುದ್ಧಿವಂತೆ, ಎಂದೂ ಇಲ್ಲದ ಪ್ರೇಮ-ದಿಂದ, "ಮಗೂ, ದಣಿದು ಬಂದಿದ್ದೀಯ! ಸ್ನಾನಮಾಡಿ, ಊಟಮಾಡು. ಆಮೇಲೆ ಎಲ್ಲ ವಿಷಯಗಳನ್ನೂ ತಿಳಿಯುವಂತೆ" ಎಂದು ಹೇಳಿದಳು. ಇದೇ ಸಮಯವನ್ನು ಸಾಧಿಸಿ, "ಊಟದ ಎಲೆಯನ್ನು ತರವುದು ಮರತೇ ಬಿಟ್ಟೆ" ಎಂದು ನಮ್ಮಪ್ಪ ತಲೆ ತಪ್ಪಿಸಿಕೊಂಡ!

ಂ ಂ ಂ ಂ

ಊಟಕ್ಕೆ ಕುಳಿತಾಗ ಎಲ್ಲವನ್ನೂ ಕೇಳಿಕೊಂಡೆ. ನನ್ನ ತಂಗಿಯನ್ನು ಹಳ್ಳಿಯಲ್ಲಿರುವ ಒಬ್ಬ ಬಡ ಕುಲುಕರ್ಣಿಗೆ ವರದಕ್ಷಿಣೆಯಿಲ್ಲದೆ ಮದುವೆ ಮಾಡಿಕೊಟ್ಟರು. ವಯಸ್ಸು ಮೂವತ್ತರ ಹತ್ತಹತ್ತಿರ. ಹದಿನಾಲ್ಕು ವರ್ಷದ ಹೆಂಡತಿಯೇ ಗಂಡನಿಗಿಂತ ಜಾಸ್ತಿ ವಿದ್ಯಾವಂತೆ! ಬಹಳ ಬಡತನ. ಸಂಪಾದನೆ ಕಡಿಮೆ. ಮೊದಲೇ ಯುದ್ಧಕಾಲ. ಮೇಲಾಗಿ ತಿನ್ನುವವರೂ ಬಹಳ. ಎರಡು ಹೊತ್ತು ರೊಟ್ಟಿ ಚಟ್ನಿ ತಿಂದು-ಕೊಂಡು ಇರಬೇಕಾಗಿತ್ತು. ಒಮ್ಮೊಮ್ಮೆ ಅದಕ್ಕೂ ಸಂಚಕಾರ. ಅತ್ತೆ

ಹುಡಿಗಿಯನ್ನು ಬಹಳ ಕಾಡುತ್ತಿದ್ದಳು. ಮನೆಗೆಲಸವಷ್ಟನ್ನೂ ಅವಳೇ ಮಾಡಬೇಕು. ಇಲ್ಲದಿದ್ದರೆ ಬೈಗುಳ....ಹೊಡೆತ. ಅನ್ನ ಹಾಕುವುದು ಬಿಟ್ಟೆಯೇ! ನೀರಿನ ಕಷ್ಟವಂತೂ ಹೇಳಲಿಕ್ಕಾಗದು. ಎರಡು ಮೈಲಿ ದೂರದಲ್ಲಿರುವ ಭಾವಿಯಿಂದ, ಮನೆಗೆ ಬೇಕಾಗುವ ನೀರೆಲ್ಲವನ್ನೂ ಅವಳೇ ಸೇದಿ ಹೊರಬೇಕಾಗಿತ್ತು. ಮದುವೆಯಲ್ಲಿ ನಮ್ಮಪ್ಪ ಕೊಟ್ಟ ಸೀರೆಯನ್ನೇ ಸಾಯುವವರೆಗೂ ಉಡುತ್ತಿದ್ದಳಂತೆ! ಪಾಪ! ಗಂಡನಿಗೆ ಎಲ್ಲಿಂದ ಹಣಬರ-ಬೇಕು! ಇಷ್ಟರಲ್ಲಿ ಅವಳ ಅದೃಷ್ಟ ಗರ್ಭವತಿಯಾದಳು! ಮುತ್ತಿನಂತಹ ಗಂಡು ಮಗುವನ್ನು ಹೆತ್ತಳು!....ಇದಕ್ಕಿಂತ ಕಮ್ಮಿ ಕ್ರಯದಲ್ಲಿ ಎಲ್ಲ ತರಹದ ಕೆಲಸಗಳಿಗೂ ಉಪಯೋಗವಾಗುವಂತಹ ಮನೆಯ ಆಳು ಸಿಗಬಹುದೇ!.... ಇದು ನಾಲ್ಕುವರೆ ತಿಂಗಳ ಹಿಂದಿನ ಮಾತು. ಕೊನೆಗೆ ಕಷ್ಟವನ್ನು ಸಹಿಸಲಾರದೆ ಭಾವಿಯಲ್ಲಿ ಬಿದ್ದು, ಪ್ರಾಣತ್ಯಾಗ ಮಾಡಿದಳು....ನನ್ನ ತಂಗಿ ದುರಾತ್ಮರ ಕೈಗೆ ಸಿಕ್ಕುಬಿದ್ದು. ಒದ್ದಾಡಿ, ಒದ್ದಾಡಿ ಪ್ರಾಣಬಿಟ್ಟಳು.... ಅಯ್ಯೋ, ನಾನು ಇದ್ದೂ ಇದ್ದೂ. ಅವಳನ್ನು ಕಾಪಾಡಲಾರದೆ ಹೋದೆನೆ!!

"ನೀವು ಅಂಥಹ ನಿರ್ಗತಿಕನಿಗೆ ಮದುವೆ ಮಾಡಿದ್ದೇಕೆ" ತಂದೆಗೆ ನಾನು ಸಿಡಿಲಿನಂತೆ ಹಾಕಿದ ಪ್ರಶ್ನೆ.

"ನನಗೆ ವರದಕ್ಷಿಣೆ ಕೊಡುವ ಚೈತನ್ಯವಿರಲಿಲ್ಲ."

"ಯಾವುದಾದರೂ ಒಡವೆ ಮಾರಿ ಹಣ ತೆರಬೇಕಾಗಿತ್ತು"

"ನನಗೆ ಅವುಗಳ ಮೇಲೆ ಒಡೆತನವಿಲ್ಲ, ನನ್ನ ಹೆಂಡತಿ ಕೊಡಲು ಸಮ್ಮತಿಸಲಿಲ್ಲ"

"ಹಾಗಿದ್ದ ಪಕ್ಷದಲ್ಲಿ, ನೀವು ಮದುವೆ ಮಾಡದೇ ಇದ್ದರೆ ನಿಮ್ಮದೇನು ಗಂಟು ಹೋಗುತ್ತಿತ್ತು. ಅವಳನ್ನು ಮುಂದಕ್ಕೆ ಓದಿಸಿ, ಅವಳ ಕಾಲ ಮೇಲೆ ಅವಳು ನಿಲ್ಲುವ ಹಾಗೆ ಮಾಡಿದ್ದರೆ, ಅವಳೇ ಮುಂದೆ ತನ್ನ ಅದೃಷ್ಟ-ವನ್ನು ನಿರ್ಧರಿಸಿಕೊಳ್ಳುತ್ತಿದ್ದಳು. ನೀವು ಕಂಡೂ ಕಂಡೂ ಅವಳನ್ನು ಈ ಗುಲಾಮಗಿರಿಯಲ್ಲಿ ತಳ್ಳಿದ್ದೇಕೆ?"

"ಬೆಳೆದ ಹುಡಿಗಿಯನ್ನು ಎಷ್ಟು ದಿನ ಮನೆಯಲ್ಲಿಟ್ಟುಕೊಳ್ಳುವ-ದಕ್ಕಾದೀತು? ನಾಲ್ಕು ಜನ ಏನನ್ನುವರು! ಮೇಲಾಗಿ ಬ್ರಾಹ್ಮಣರಾದ ನಾವು

ಹೆಣ್ಣು ಹುಡುಗಿಯರಿಗೆ ವ್ಯೈ ನೆರೆಯುವದರೊಳಗಾಗಿ ಮದುವೆ ಮಾಡಿ-ಬಿಡಬೇಕೆಂಬ ರೂಢಿಯಿದೆ"

"ನಿಮ್ಮ ಧರ್ಮ ಹಾಳಾಯಿತು. ಹುಟ್ಟಿಸಿದ ತಂದೆಗೆ, ಪ್ರಪಂಚದ ಅನುಭವವಿಲ್ಲದ ತನ್ನ ಮಕ್ಕಳಿಗೆ, ಅವರು ಆಜನ್ಮ ಪರ್ಯಂತರವೂ ಸುಖವಾಗಿರುವ ಹಾಗೆ, ಅಸ್ತಿವಾರವನ್ನು ಹಾಕಿಕೊಡಬೇಕಾದುದು ಅವನ ಕರ್ತವ್ಯ. ಹಾಗೆ ಮಾಡಲು ಆತನಿಗೆ ಅಶಕ್ಯವಾದರೆ, ತನ್ನ ಮಕ್ಕಳ ಭಾವೀ ಜೀವನವನ್ನು ಮಾರ್ಪಾಡುವಂಥಹ ಯಾವ ವಿಧವಾದ ಕಾರ್ಯವನ್ನೂ ಕೈಗೊಳ್ಳಲು ಅವನಿಗೆ ಅಧಿಕಾರವಿರುವುದಿಲ್ಲ. ಅಂಥಹ ಮಕ್ಕಳು, ತಮ್ಮ ಬುದ್ಧಿ ಶಕ್ತಿಗೆ ತೋರಿದಂತೆ ತಮ್ಮ ಭಾವೀ ಜೀವನವನ್ನು ನಿರೂಪಿಸಿಕೊಳ್ಳಲು ಅವಕಾಶ ಕೊಡಬೇಕಾದುದು ತಂದೆಯ ಧರ್ಮ. ಇಷ್ಟನ್ನೂ ಮಾಡಲಸಾಧ್ಯವಾದ ತಂದೆಗೆ ಮಕ್ಕಳನ್ನು ಹುಟ್ಟಿಸುವ ಅಧಿಕಾರವೇ ಇರುವುದಿಲ್ಲ. ಇಷ್ಟು ಸುಲಭ ಸಾಧ್ಯವಾದ ನಿಯಮಗಳಿಗೂ ಒಳಪಡದ ತಂದೆ ಮನುಷ್ಯನಲ್ಲ; ಎರಡು ಕಾಲಿನ ಪಶು. ಧರ್ಮದ ಹೆಸರನ್ನು ಉಚ್ಚರಿಸಲೂ ಯೋಗ್ಯನಲ್ಲ. ನೀವು ನಿರ್ಭಾಗ್ಯಳಾದ ನನ್ನ ತಂಗಿಯನ್ನು, ಮದುವೆ ಮಾಡಿಕೊಟ್ಟು, ಅವಳನ್ನು ಅಜನ್ಮಪರ್ಯಂತರವೂ ಅತಿದಾರುಣವಾದ ದಾರಿದ್ರ್ಯಕ್ಕೂ ಮತ್ತು ಕಷ್ಟ ಪರಂಪರೆಗಳಿಗೂ ಗುರಿ-ಮಾಡಿ, ಅವಳು ಆತ್ಮಹತ್ಯವನ್ನು ಮಾಡಿಕೊಳ್ಳುವ ಹಾಗೆ ಮಾಡಿದಿರಿ. ಇದಕ್ಕೂ ಖೂನಿಗೂ ಯಾವ ವ್ಯತ್ಯಾಸವೂ ಇರುವುದಿಲ್ಲ. ನೀವು ಲಲಿತೆಯನ್ನು ಕೊಲೆ ಮಾಡಿರುವಿರಿ.

ಕಾಲಕ್ರಮೇಣ, ನೀವು ನಿಮ್ಮ ತಪ್ಪನ್ನು ತಿಳಿದುಕೊಂಡ ಮೇಲೆ ನನಗಾದರೂ ಅವಳ ಸ್ಥಿತಿಗತಿಗಳ ಬಗ್ಗೆ ಬರೆದಿದ್ದರೆ, ನಾನು, ಅವಳು ತನ್ನ ಅಪ್ರಯೋಜಕ ಗಂಡನನ್ನು ಬಿಡುವ ಹಾಗೆ ಬಲಾತ್ಕರಿಸುತ್ತಿದ್ದೆ. ಅನಂತರ ಅವಳನ್ನು ಮುಂದೆ ಓದಿಸಿ, ಅವಳನ್ನು ಒಬ್ಬ ಮನುಷ್ಯಳನ್ನಾಗಿ ಮಾಡುತ್ತಿದ್ದೆ. ಈಗ ಎಷ್ಟೋ ಬಾಲವಿಧವೆಯರೂ, ತಾರುಣ್ಯದಲ್ಲಿ ಪತಿಯನ್ನು ಕಳೆದುಕೊಂಡಿ-ರುವವರೂ ಇಲ್ಲವೆ? ಮೇಲಾಗಿ ನಾನೂ ಸಹ ಮದುವೆ ಮಾಡಿಕೊಳ್ಳದೆ, ಬದುಕು ಏನೆಂಬುದನ್ನು ಅವಳಿಗೆ, ಮೇಲ್ಪಂಕ್ತಿ ಹಾಕಿ, ಹೇಳಿ ಕೊಡುತ್ತಿದ್ದೆ.

ನಮ್ಮಪ್ಪನು ಒಂದು ಶಬ್ದವನ್ನಾದರೂ ಉಚ್ಚರಿಸಲಿಲ್ಲ. ತಪ್ಪಿತಸ್ಥನಿಗೆ ಮಾತನಾಡಲಿಕ್ಕೆ ಧೈರ್ಯ ಉಂಟೆ? ಈ ಹೊತ್ತಿಗೆ ಬಂದ ಅಕ್ಕನೊಬ್ಬಳು "ಥೂ, ಖೋಡಿ! ಏನು ಅನಿಷ್ಟ ಮಾತಾಡುತ್ತಿದ್ದೀಯೋ? ಅವಳಿಗೇನು ಕಮ್ಮಿ! ಪುಣ್ಯವಂತೆ, ಮುತ್ತೈದೆಯಾಗಿ ಪ್ರಾಣಬಿಟ್ಟಳು. ಎಲ್ಲರಿಗೂ ಲಭಿಸುತ್ತದಯೇ ಆ ಪುಣ್ಯ?"

ನಾನು ಹಣೆಹಣೆ ಜಜ್ಜಿಕೊಂಡೆ.

o o o o

ಅನಂತರ ನನ್ನ ತಂಗಿಯ ಮಗುವು ಹೇಗಿದೆಯೆಂಬುದನ್ನು ನೋಡಲು ಹೋದೆ. ಅದು ಒಂದು ಅಸ್ಥಿಪಂಜರ. ಸಾಕಷ್ಟು ಆರೈಕೆಯಿಲ್ಲ. ನಾಲ್ಕೋ, ಐದೋ ರೋಗಗಳಾದರೂ ಮನೆ ಮಾಡಿಕೊಂಡಿರಬಹುದು. ಔಷಧವನ್ನು ಕೊಡಿಸಲು ಹುಟ್ಟಿಸಿದ ಅಪ್ಪನಿಗೆ ಚೈತನ್ಯವಿರಲಿಲ್ಲ. ಅದರ ಸಂಕಟವನ್ನು ನೋಡಲಾರದೆ, ಅದನ್ನು ಪಟ್ಟಣಕ್ಕೆ ಕರೆತಂದು ಡಾಕ್ಟರರಿಗೆ ತೋರಿಸಿದೆ. ಅವರು 'ಈ ಮಗುವು ಬದುಕುವುದು ಕಷ್ಟ-ಹೊಟ್ಟೆಯಲ್ಲಿದ್ದಾಗಿನಿಂದ ಇಲ್ಲಿಯವರೆಗೂ ಆರೈಕೆಯನ್ನೇ ಕಂಡಿಲ್ಲ. ಮಗುವನ್ನು ನರಳಿಸಿ ನರಳಿಸಿ ಸಾಯಿಸುವದಕ್ಕಿಂತ, ಒಮ್ಮೆಲೇ ಕುತ್ತಿಗೆ ಹಿಚುಕಿ ಸಾಯಿಸಿ ಬಿಡುವುದು ಮೇಲು'' ಎಂದೂ ಮುಂತಾಗಿ ನನ್ನನ್ನು ಹೀನಾಮಾನವಾಗಿ ಅಲ್ಲಗಳೆದರು. 'ನಾನಲ್ಲ ಇದರ ತಂದೆ........................'ಎಂದಿಷ್ಟೇ ಹೇಳಿ ತಲೆ ತಗ್ಗಿಸಿದೆ.

ಕಾಲಾಂತರದಲ್ಲಿ ಆ ಮಗುವೂ, ನಿರೀಕ್ಷಿಸಿದಂತೆ, ಸತ್ತುಹೋಯಿತು.

ಈಗ ನನ್ನ ತಂಗಿಯ ಗಂಡನು ಬೇರೆ ಮದುವೆಯಾಗಲು ಹವಣಿಸುತ್ತಿದ್ದಾನಂತೆ! ನಮ್ಮಲ್ಲಿ ಅವನಿಗೆ ಹೆಣ್ಣು ಸಿಗುವುದು ಬಲು ಸುಲುಭ ತಾನೆ. ಈಗಾಗಲೇ ಮದುವೆಯಾಗಿರಲೂ ಬಹುದು. ಹೊಟ್ಟೆಗೆ ಹಿಟ್ಟನ್ನು ಸಂಪಾದಿಸುವ ಯೋಗ್ಯತೆ ಇಲ್ಲದಿರುವವರಿಗೂ ಮದುವೆ, ಹೆಂಡತಿ, ಮಕ್ಕಳು! ಅಯ್ಯೋ ಹಿಂದೂಸ್ಥಾನವೇ!!

ಕೃಷ್ಣ, ಒಂದು ಪಕ್ಷ ಮುದುಕನಾದ ನಮ್ಮಪ್ಪನು, ಎರಡನೆಯ ಸಲ ಮದುವೆಯಾಗದೆ, ಇದ್ದುದರಲ್ಲೇ ನಮ್ಮನ್ನು ಮುಂದೆ ತರಲು ಪ್ರಯತ್ನ ಪಟ್ಟಿದ್ದರೆ, ನಮ್ಮಗಳೆಲ್ಲರ ಜೀವನವು ಎಷ್ಟು ಸುಖಮಯವಾಗಿರುತ್ತಿತ್ತು

ಎಂಬುದನ್ನು ಯೋಚಿಸಿ ನೋಡು. 'ಹಾಸಿಗೆಯಿದ್ದಷ್ಟು ಕಾಲು ಚಾಚು' ಎಂಬ ನಾಣ್ಣುಡಿಯನ್ನು ಮರೆತು, ತನಗೆ ಬರುವ ಸಂಬಳವು ಇದ್ದ ಜನಕ್ಕೇ ಸಾಲದೆಯಿರಲು, ತಿರುಗಿ ಮದುವೆ ಮಾಡಿಕೊಂಡು, ಮಕ್ಕಳ ಸಂಖ್ಯೆಯನ್ನು ಹೆಚ್ಚಿಸಿಕೊಂಡರೆ, ದೋಣಿಯಲ್ಲಿ ತಡೆಯ ಬಹುದಾದ ಭಾರಕ್ಕಿಂತ ಹೆಚ್ಚು ಭಾರ ಹೇರಿದರೆ ಅದಕ್ಕೆ ಏನುಗತಿ ಕಾದಿರುವುದೋ, ಅದೇ ಗತಿ ಅವನಿಗೂ ಆಗುವುದಿಲ್ಲವೆ. ದೂರಾಲೋಚನೆಯಿಲ್ಲದೆ, ಬರೆ ಸ್ವಾರ್ಥ ಬುದ್ಧಿಯಿಂದ ನಮ್ಮಪ್ಪನು ತನ್ನ ಜೀವನವನ್ನು ಹಾಳು ಮಾಡಿಕೊಂಡನಲ್ಲದೆ, ನಮ್ಮನ್ನೂ ಸರ್ವನಾಶಕ್ಕೆ ಗುರಿಮಾಡಿದನು. ನಮ್ಮ ಬೆನ್ನು ಹಿಂದೆ ನಡೆಯುತ್ತಿರುವ ಇಂತಹ ಮುದುಕರ ಹಾವಳಿಯನ್ನು ಬೇಗನೆ ನಾಶ ಮಾಡದೆ ಹೋದರೆ ನಮಗೆ ಉಳಿಗಾಲವಿಲ್ಲ!

ನಾವು ಹುಟ್ಟಿದುದು ಅವನ ತಪ್ಪು; ಹೊಣೆಗಾರರಾಗಬೇಕಾದುದು ನಾವು! ಹೇಗಿದೆ ನೋಡು, ಪ್ರಪಂಚದ ನ್ಯಾಯ, ದೇವರ ನ್ಯಾಯ!!

(ಡಿಸೆಂಬರ್, ೧೯೪೪, 'ಪ್ರಜಾಮತ' ಬೆಂಗಳೂರು)

